# ಕೊಡಗು ಸಂಗಾತಿ

ಫೆಬ್ರವರಿ1 ರಿಂದ 15, 2000 ಪಾಕ್ಷಿಕ ಪತ್ರಿಕೆ (ಪೊನ್ನಿ 16 ರಿಂದ 30, 2000)

ಸಂ. ೩೫,.ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K. R. N. N. 240 ಸಂಪುಟ : 4 ಸಂಚಿಕೆ : 3 ಪುಟಗಳು : 24 ಬೆಲೆ ರೂ. : 6-00




[ಲೇಖನ ಒಳಪುಟದಲ್ಲಿ]

## 1992ರ ದೆಹಲಿ ಏಷ್ಯಾಡ್‌ನ 42.195 ಕಿ. ಮೀ.ನ ಮೆರಾಥಾನ್ ವೀರ ಕಂಚಿನ ಪದಕ ವಿಜೇತ : ತಾವ್‌ನಾಡಿನ ಹೊಸೂರು ಕುಕ್ಕಪ್ಪ ಸೀತಾರಾಮ

## ಕೊಡಗು ಸಂಗಾತಿಯ ಗಾಳಿಬೀಡು ಕೇಂದ್ರದ ಸಂಚಾಲಕರಾಗಿ/ಏಜೆಂಟ್‌ರಾಗಿ ಶ್ರೀ ಕೋಳುಮುಡಿಯನ ಅನಂತ್ ಕುಮಾರ್ ಆಯ್ಕೆ. ಓದುಗರ ಸಹಕಾರ ನಿರೀಕ್ಷೆ.



ಕೊಡಗು ಸಂಗಾತಿ, ಪಾಕ್ಷಿಕ ಪತ್ರಿಕೆಯ ಸಂಚಾಲಕರಾಗಿ, ಏಜೆಂಟ್ ಆಗಿ ಶ್ರೀ ಕೋಳುಮುಡಿಯನ ಅನಂತ್ ಕುಮಾರ್‌ನವರನ್ನು ಅವರ ವಿನಂತಿ ಮೇರೆ ಆಯ್ಕೆ ಮಾಡಲಾಗಿದೆ. ಶ್ರೀಯುತರಿಗೆ ಗಾಲ್ಫ್ ಗ್ರೌಂಡ್, ಗಾಳಿಬೀಡು, ವಣಚ್ಚಲ್, ಮೊಣ್ಣಂಗೇರಿ I, II, ಕಾಲೂರು, ಮಕ್ಕಂದೂರು, ಹೆಬ್ಬೆಟ್ಟಗೇರಿ ಗ್ರಾಮಗಳಿಗೆ ಸೀಮಿತವಾಗಿ ವರದಿ, ಕಲೆಕ್ಷನ್, ಜಾಹೀರಾತು ಇತ್ಯಾದಿಯಾಗಿ ಕೆಲಸ ನಿರ್ವಹಿಸಲು ಅನುವು ನೀಡಲಾಗಿದೆ. ಸಹೃದಯ ಓದುಗರು ಸಹಕರಿಸುವಂತೆ ಕೋರಿಕೆ.

- ಸಂಪಾದಕಿ

## ಅಭಿನಂದನೆಗಳು



ಕೊಡಗು ಜಿಲ್ಲಾ ಕಾಂಗ್ರೆಸ್ ಸಮಿತಿಯ ನೂತನ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಗೊಂಡ ಸ್ನೇಹಿತರಾದ ವಕ್ಕಲಿಗರ ಪಿ. ಸುರೇಶ್‌ರವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಶ್ರೀ ಸುರೇಶ್‌ರವರು "ಪರಾಕ್ರಮ ಸಂಜೆ" ದಿನ ಪತ್ರಿಕೆಯ ಸಂಪಾದಕರಾಗಿಯೂ ಕೊಡಗು ಜಿಲ್ಲಾ ಪತ್ರಿಕಾ ಸಂಪಾದಕರ ಸಂಘದ ಅಧ್ಯಕ್ಷರಾಗಿಯೂ ಮತ್ತು ಮಡಿಕೇರಿ ದಸರಾ ಸಮಿತಿಯ ಉಪಾಧ್ಯಕ್ಷರಾಗಿಯೂ ದಕ್ಷರಾಗಿಯೂ, ನಿಷ್ಠೆಯಿಂದಲೂ ಸೇವೆ ಸಲ್ಲಿಸುತ್ತಿರುವ ಇವರು ಹೆಚ್ಚಿನ ಯಶಸ್ಸನ್ನು ಗಳಿಸಲಿ ಎಂದು ಹಾರೈಸುತ್ತೇನೆ.

ಪಟ್ಟಡ ಪ್ರಭಾಕರ, ಮೈಸೂರು

## ವರ್ಷದ ವ್ಯಕ್ತಿಯಾಗಿ ಸುಳ್ಯದ ಡಾ. ಪ್ರಭಾಕರ ಶಿಶಿಲ



ಅಮೇರಿಕಾದ ಬಯಾಗ್ರಾಫಿಕಲ್ ವಿದ್ಯಾಸಂಸ್ಥೆಯಲ್ಲಿ ವಿವಿಧ ಕ್ಷೇತ್ರದಲ್ಲಿ ಮಾಡಿರುವ ಸಾಧನೆಯ ಹಿನ್ನೆಲೆಯಲ್ಲಿ ಸುಳ್ಯದ ಡಾ. ಪ್ರಭಾಕರ ಶಿಶಿಲ ಅವರನ್ನು ವರ್ಷದ ವ್ಯಕ್ತಿಯಾಗಿ ಆಯ್ಕೆ ಆಗಿದ್ದಾರೆ ಎಂದುತಿಳಿದು ಬಂದಿದೆ. ಶ್ರೀಯುತರು ಕೊಡಗು ಸಂಗಾತಿ ಪತ್ರಿಕೆಗೆ ಅಪರೂಪದ ಬರಹಗಾರರು. ಇವರಿಗೆ ಸಂಗಾತಿಯ ಶುಭ ಹಾರೈಕೆಗಳು.



ಜನನ : 13-02-1999

## ಪ್ರೀತಿಯ ಕಣ್ಮಣಿ ಜಯಶ್ರೀ (ಲಚ್ಚಿ)

(ಕಲ್ಲುಮುಟ್ಲುಬಸಪ್ಪ ಮತ್ತು ರೂಪರವರ ಪುತ್ರಿ)

ನಿನ್ನ ಬಾಳು ಚಿರಾಯುವಾಗಲೆಂದು
ಪ್ರಥಮ ವರ್ಷದ ಹುಟ್ಟು ಹಬ್ಬಕ್ಕೆ ಶುಭಾಶಯವನ್ನು ಕೋರುವ

ಅಜ್ಜ ಮತ್ತು ಅಜ್ಜಿ : **ಕಲ್ಲುಮುಟ್ಲು ರಾಮಪ್ಪ ಮತ್ತು ಅಮ್ಮವ್ವ, ಕಾಂತೂರು ಗ್ರಾಮ**
ಚಿಕ್ಕಪ್ಪ ಮತ್ತು ಆಂಟಿ : **ಕಲ್ಲುಮುಟ್ಲು ಸೋಮಯ್ಯ ಮತ್ತು ಜಮುನ, ಕಾಂತೂರು ಗ್ರಾಮ**
ಅತ್ತೆ, ಮಾವ ಮತ್ತು ಮಕ್ಕಳು :
**ಅಕ್ಕಾರಿ ಸುಬ್ಬಯ್ಯ, ಶೋಭ, ಯತಿನ್ ಮತ್ತು ಲವುಲಿ, ಹಾಕತ್ತೂರು ಗ್ರಾಮ**
**ಕುಂಜಿಲನ ರಮೇಶ, ನಳಿನಿ ಮತ್ತು ಶಿಕ್ಷಿತ್, ಪಶ್ಚಿಮ ಬಂಗಾಳ**
ಅಕ್ಕ : **ಗೋವಿಂದಮ್ಮನ ರಶ್ಮಿ ಕುಟ್ಟಪ್ಪ, ಬೆಂಗಳೂರು**



## ಒಳನೋಟ






| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | **ಬೈತಡ್ಕ ಜಾನಕಿ ಬೆಳ್ಯಪ್ಪ,** ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
|  ಸಂಗಾತಿ ಚಿಪ್ಪೆ ಲಭ್ಯ | **ಪಾಂಡ್ಯನ್ ಕ್ಯಾಸೆಟ್ ಅಂಗಡಿ,** ಖಾಸಗಿ ಬಸ್ ನಿಲ್ದಾಣ, ಮಡಿಕೇರಿ **ಫೋನ್** : 08272/29620 |
|  ಕುಶಾಲ ನಗರ | **ಕುಂಭಗೌಡನ ಸೋಮಣ್ಣ,** ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 **ಫೋನ್** : 08276/73370 |
|  ಬೆಂಗಳೂರು ಮಹಾನಗರ | **ಅಮ್ಮಾಜೀರ ಪೊನ್ನಪ್ಪ,** 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, **ಫೋನ್** :080/6342822 |
|  ಬೆಂಗಳೂರು ಮಹಾನಗರ | **ಕಲ್ಲುಮುಟ್ಲು ಬಸಪ್ಪ,** ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19, **ಫೋನ್** : 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -**75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಸಮಾಜದ ವ್ಯಕ್ತಿಗಳ ಪರಿಚಯದ ಸಂಗ್ರಹದ ಪ್ರಕಟಣೆಯ ಅಗತ್ಯ

ಈ ಹಿಂದೆ ಸಂಗಾತಿಯು ಗೌಡ ಜನಾಂಗದ ವ್ಯಕ್ತಿಗಳ ಪರಿಚಯವನ್ನು ಪ್ರಕಟಿಸುವ ಯೋಜನೆಯನ್ನು ಹಾಕಿ ಸಾರ್ವಜನಿಕರನ್ನು ಕೋರಿದ್ದರೂ ಯಾರಿಂದಲೂ ಹೆಚ್ಚಿನ ಪ್ರೋತ್ಸಾಹ ದೊರೆಯಲಿಲ್ಲ. ಒಂದು ಜನಾಂಗದ ಹಿರಿಯರನ್ನು ಸ್ಮರಿಸಿಕೊಳ್ಳುವ ಹಾಗೂ ಅವರ ವಿಷಯ ಈಗಿನ ಪೀಳಿಗೆ ತಿಳಿದು ಕೊಳ್ಳುವುದು ಅವಶ್ಯಕ. ಒಂದು ದೇಶದ ಚರಿತ್ರೆಯನ್ನು ಪ್ರತಿ ವ್ಯಕ್ತಿ ಓದಿ ತಿಳಿದುಕೊಳ್ಳುವುದು ಎಷ್ಟು ಅವಶ್ಯಕವೋ ಅದೇ ರೀತಿ ಒಂದು ಸಮಾಜದ ಹಿರಿಯ ವ್ಯಕ್ತಿಗಳ ವಿಷಯ ತಿಳಿದುಕೊಳ್ಳುವುದು ಅವಶ್ಯಕ.

ಕೆಲವರು ಇವುಗಳನ್ನೆಲ್ಲಾ ಕಟ್ಟಿಕೊಂಡು ನಮಗೇನಾಗಬೇಕೆಂಬ ತಾತ್ಸಾರ ಭಾವನೆಯಿಂದಿರಬಹುದು. ಆದರೆ ಪ್ರತಿಯೊಬ್ಬನಿಗೂ ತನ್ನ ಮನೆತನದ ಹಿರಿಯರ ವಿಷಯ ತಿಳಿದು ಕೊಳ್ಳುವ ಆಸಕ್ತಿ ಇದ್ದೇ ಇರುತ್ತದೆ. ಈ ವಿಷಯದಲ್ಲಿ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದವರು 1970 ರಲ್ಲಿ ಹೊರಡಿಸಿದ ಗೌಡ ಸಂಸ್ಕೃತಿ ಹೊತ್ತಿಗೆಯಲ್ಲಿ ಅಲ್ಪ ಸ್ವಲ್ಪ ಪ್ರಕಟಿಸಿದ್ದಾರೆ. ಈಗ ಬೆಂಗಳೂರಿನಲ್ಲಿ ಆದ ಚುಂಚನ ಗಿರಿಯ ಮಠಾಧಿಪತಿಗಳಾದ ಶ್ರೀ ಶ್ರೀ ಶ್ರೀ ಬಾಲ ಗಂಗಾಧರನಾಥ ಸ್ವಾಮೀಜಿಯವರ ಆದೇಶದ ಹಾಗೂ ಚುಂಚನಗಿರಿ ಮಠದ ಆಶ್ರಯದಲ್ಲಿ ಕರ್ನಾಟಕದ ಎಲ್ಲಾ ಒಕ್ಕಲಿಗರ ಚರಿತ್ರೆ ಕಟ್ಟೆ ಕಟ್ಟಳೆ, ಸಾಮಾಜಿಕ ಸ್ಥಿತಿಗತಿ, ಕರ್ನಾಟಕದ ಒಕ್ಕಲಿಗರ ಸ್ಥಿತಿಗತಿ, ಭಾರತದ ಕೃಷಿಕ ಸಮಾಜದಲ್ಲಿಯ ಹೋಲಿಕೆ ಅವರ ಸಂಸ್ಕೃತಿ ಹಾಗೂ ಪ್ರತಿ ತಾಲ್ಲೂಕಿನ, ಜಿಲ್ಲೆಯ ಒಕ್ಕಲಿಗ ಪ್ರಾಮುಖ್ಯ ವ್ಯಕ್ತಿಗಳ ಜೀವನ ಪರಿಚಯ ಈ ರೀತಿಯಾಗಿ 5 ಸಂಪುಟಗಳಲ್ಲಿ ಹೊರಡಿಸಲು ಈಗಾಗಲೇ ಕೆಲವು ವರ್ಷಗಳಿಂದ ಸತತವಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದರಲ್ಲಿ ಕೊಡಗು ಮತ್ತು ದ. ಕ. ಗೌಡರ ವಿಷಯವು ಸೇರಿದೆ. ಸಮಗ್ರ ಗ್ರಂಥ ಎಲ್ಲರಿಗೂ ಎಟುಕುವುದು ಕಷ್ಟಸಾಧ್ಯವಾದರೂ ಮೇಲೆ ಕಾಣಿಸಿದ ವಿಷಯದ ಸಮಗ್ರ ಹೊತ್ತಿಗೆಯೊಂದು ಮುದ್ರಣಗೊಂಡು ಹೊರಬೀಳುವ ವಿಷಯ ಸಂತೋಷಕರ. ಅದೇ ರೀತಿ ಕೊಡಗು ಹಾಗೂ ದ. ಕ. ಗೌಡರ ವಿಷಯ ಪ್ರಕಟಣೆಗೊಂಡರೆ ಅದೊಂದು ಮಹಾತ್ಕಾರ್ಯ ವಾಗುವುದಲ್ಲವೇ ಎಂದು ಸಂಗಾತಿಯ ಅಭಿಪ್ರಾಯ.



## 1968-69 ರ ಸಾಲಿನ ರಾಜ್ಯ ಪ್ರಶಸ್ತಿ ವಿಜೇತ ಪಟ್ಟಡ ದಿ. ತಿಮ್ಮಯ್ಯ ಮಾದಪ್ಪ



ದಿ. ಪಟ್ಟಡ ತಿಮ್ಮಯ್ಯನವರ ನಾಲ್ಕು ಜನ ಪುತ್ರರಲ್ಲಿ ಎರಡನೆಯವರಾಗಿ 1904ರಲ್ಲಿ ಅವಂದೂರು ಗ್ರಾಮದಲ್ಲಿ ಜನಿಸಿದರು. ಇವರ ಹಿರಿಯ ಸಹೋದರ ಅಣ್ಣಯ್ಯ ಮತ್ತು ಕಿರಿಯರಾದ ಕೃಷ್ಣಪ್ಪ ಹಾಗೂ ಬೆಳ್ಯಪ್ಪನವರು.

7ನೇ ತರಗತಿಯ ತನಕ ಓದಿದ ಇವರು ಹಾಸನ ಜಿಲ್ಲೆಯ ಪ್ರಾಥಮಿಕ ಬಾಲಕರ ಪಾಠಶಾಲೆ ಹಿರಿವೊಟೆ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ ಇಲ್ಲಿ ಅಧ್ಯಾಪಕರಾಗಿ 1925ರಲ್ಲಿ ಸೇರಿದರು. ಸುಮಾರು 44ವರ್ಷಗಳ ದೀರ್ಘಕಾಲ ಶಿಕ್ಷಕ ವೃತ್ತಿಯಲ್ಲಿ ಸಲ್ಲಿಸಿದ ಗಣನೀಯ ಸೇವೆಗಾಗಿ, ಶ್ರೀಯುತರ ನಿಷ್ಠಾವಂತ, ಪ್ರಾಮಾಣಿಕತನದ ಸೇವೆಯನ್ನು ಗುರುತಿಸಿ ಕರ್ನಾಟಕ ರಾಜ್ಯ ಸರಕಾರವು 1968-69ರ ಸಾಲಿನಲ್ಲಿ ರಾಜ್ಯ ಉತ್ತಮ ಶಿಕ್ಷಕ ಪ್ರಶಸ್ತಿಯನ್ನು ನೀಡಿ ಗೌರವಿಸಿತು.

ಮಾದಪ್ಪನವರು ಪಾಂಡನ ಸುಬ್ಬಯ್ಯ Ex. MLA, ಅವರ ಹಿರಿಯ ಅಕ್ಕ ಸಣ್ಣಮ್ಮನವರನ್ನು ಮದುವೆಯಾಗಿ, ಒಬ್ಬ ಗಂಡು ಮಗನನ್ನು ಮತ್ತು ಒಬ್ಬಳು ಹೆಣ್ಣುಮಗಳನ್ನು ಪಡೆದಿರುತ್ತಾರೆ. ಮಗ ಪಳಂಗಪ್ಪ ಚೆರಿಯಮನೆ ಪೂವಯ್ಯನವರ ಮಗಳು ಕಮಲಳನ್ನು ಲಗ್ನವಾಗಿದ್ದರೆ, ಮಗಳು ಪೊಡನೊಳನ ಬೆಳ್ಯಪ್ಪನವರನ್ನು ಕೈಹಿಡಿದು ಸುಖಿ ಜೀವನ ನಡೆಸುತ್ತಿದ್ದಾರೆ.

ಶ್ರೀ ಮಾದಪ್ಪನವರು 28-12-1969ರಲ್ಲಿ ದೀರ್ಘ ಸೇವೆಯ ನಂತರ ನಿವೃತ್ತರಾದರು. ಕಾಟಕೇರಿಯ (ಉಡೊತ್ತು ಮೊಟ್ಟೆ)ಯಲ್ಲಿ ಕೃಷಿಕರಾಗಿ ನೆಲೆನಿಂತು, ನಂತರ ದಿನಾಂಕ 17-4-1977 ರಲ್ಲಿ ವಿಧಿವಶರಾದರು. ಅರೆಭಾಷೆ ಜನಾಂಗಕ್ಕೂ ಹುಟ್ಟಿದ ಮನೆಗೂ ಕೀರ್ತಿ ತಂದ ಇವರ ದಿವ್ಯಾತ್ಮಕ್ಕೆ ಜನಾಂಗದ ಪರವಾಗಿ ಶಾಂತಿಯನ್ನು ಕೊಡಗು ಸಂಗಾತಿ ಹಾರೈಸುತ್ತದೆ.

ಲೇಖನ : ಪಟ್ಟಡ ಪ್ರಭಾಕರ

''ಒಲೆಗೊಂದರಂತೆ ಪತ್ರಿಕೆಯನ್ನು ಕೊಂಡು ಓದಿ''





# ಒಂದೇ ವಾರದಲ್ಲಿ ಮೂವರು ಯೋಧರ ಬಲಿ : ದುಃಖ ತಪ್ತ ಕೊಡ್‌ಗ್ ನಾಡ್

## ಪ್ರಪಾತಕ್ಕೆ ಮಿಲಿಟರಿ ಟ್ರಕ್ ಉರುಳಿ ಸಾವು :



ಮಡಿಕೇರಿನಿವಾಸಿ ಅಬ್ದುಲ್ ರಝಾಕ್‌ನವರು ದಿನಾಂಕ 8-1-2000ದಲ್ಲಿ ಈಶಾನ್ಯ ಭಾಗದ ಅರುಣಾಚಲ ಪ್ರದೇಶದಲ್ಲಿ ಸಂಭವಿಸಿದ ರಸ್ತೆ ಅಪಘಾತದಲ್ಲಿ ಮೃತರಾದರು. ಇವರು ಭಾರತದ ಸೇನೆಯಲ್ಲಿ ನಾಯಕ್ ಆಗಿಸೇವೆ ಸಲ್ಲಿಸುತ್ತಿದ್ದರು. ಇವರಿಗೆ 36ವರ್ಷಪ್ರಾಯವಾಗಿತ್ತು.

ಸೇನೆಯಲ್ಲಿರುವ ಇವರು ರಜೆಯಲ್ಲಿ ಮನೆಗೆ ಮರಳುತ್ತಿದ್ದಾಗ ಶಕ್ತಿಮಾನ್ ಮಿಲಿಟರಿ ವಾಹನವು ಸೀಸಾ ಎಂಬಲ್ಲಿ 250 ಅಡಿಗಳ ಪ್ರಪಾತಕ್ಕೆ ಉರುಳಿ ರಝಾಕ್ ಸೇರಿದಂತೆ 7ಮಂದಿ ಯೋಧರು ಸ್ಥಳದಲ್ಲೇ ಮೃತರಾದರು. 4ದಿನಗಳ ನಂತರ 12-1-2000ರಲ್ಲಿ ಸೇನಾ ಸಿಬ್ಬಂದಿಗಳು ಮೃತದೇಹವನ್ನು ಮಡಿಕೇರಿಗೆ ತರಲಾಗಿ ಸಂಬಂಧಿಕರಿಗೆ ಒಪ್ಪಿಸಿದ್ದು ಅದೇ ದಿನ ಅಂತ್ಯ ಸಂಸ್ಕಾರ ಸಕಲ ಗೌರವದೊಡನೆ ನೆರವೇರಿತು.

ಮೃತರ ತಾಯಿ ಬೀಫಾತಿಮಾ, ಸಹೋದರ ಇ. ಸುಲೇಮಾನ್ ಶೇಖ್, (ಅಧ್ಯಾಪಕ) ಪತ್ನಿ ಫಾತಿಮಾ (ಕಲ್ಲುಗುಂಡಿ), ಮಕ್ಕಳಾದ ಶಬಿನ 5ವರ್ಷ, ಸಮೀನ 3ವರ್ಷ, ಹಾಗೂ ಸಮೀರ್1½ ವರ್ಷ ಇವರನ್ನು ಅಗಲಿದ್ದಾರೆ. ದೇಶ ಸೇವೆಗೈಯುತ್ತಿದ್ದ ಇವರ ನಿಧನಕ್ಕೆ ಸಂಗಾತಿ ಸಂತಾಪ ಸೂಚಿಸುತ್ತದೆ.

## ಉಗ್ರಗಾಮಿಯರ ಗುಂಡಿಗೆ ಬಲಿ :

ದಿನಾಂಕ 12-1-2000ದಂದು ಕಾಶ್ಮೀರದ ಕೆನಾಲ್ ಪ್ರದೇಶದಲ್ಲಿ ಉಗ್ರಗಾಮಿಗಳು ಶಸ್ತ್ರಸಜ್ಜಿತರಾಗಿ ಮಿಂಚಿನ ಹೋರಾಟ ನಡೆಸಿದ್ದರಿಂದ ಭಾರತೀಯ ಸೇನೆಯಲ್ಲಿ ಮೇಜರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಕೊಡಗಿನ ಕಲಿ ಮಂಗೇರಿರ ಮುತ್ತಣ್ಣನವರು ಮತ್ತು ಇತರ ಐದು ಮಂದಿ ಯೋಧರು ಬಲಿಯಾದರು.

ಇವರ ತಂದೆಯವರು ಸಹ ಭಾರತೀಯ ಸೇನೆಯಲ್ಲಿ ಮೇಜರ್ ಆಗಿ ನಿವೃತ್ತಿ ಹೊಂದಿದವರು, ಮುತ್ತಣ್ಣನವರು ಚಿಣಪ್ಪನವರ ದ್ವಿತೀಯ ಪುತ್ರರು. ಪತ್ನಿ ರೀನಾ ಮತ್ತು 6 ತಿಂಗಳ ಹಸುಗೂಸು ದೀಕ್ಷಾ ಬೆಂಗಳೂರಿನಲ್ಲಿ ಸೇನಾ ವಿಭಾಗದ ಕ್ವಾರ್ಟರ್ಸ್‌ನಲ್ಲಿ ವಾಸವಾಗಿದ್ದಾರೆ.



12ರ ಸಂಜೆ ಭಾರಿ ಶಸ್ತ್ರಾಸ್ತ್ರ ಸಹಿತ ಸೇನಾ ಮುಖ್ಯ ಕಛೇರಿಯ ಒಳನುಗ್ಗಿದ ಪಾಕಿಸ್ಥಾನದ ಲಷ್ಕರ್-ಎ-ತೋಯಿಬಾ ಸಂಘಟನೆಗೆ ಸೇರಿದ ಮೂವರು ಉಗ್ರಗಾಮಿಗಳು ಗ್ರೇನೆಡ್ ಸಹಿತ ಮನಬಂದಂತೆ ಹುಚ್ಚುಚ್ಚಾಗಿ ಗುಂಡು ಹಾರಿಸತೊಡಗಿದರು. ರಾಷ್ಟ್ರೀಯ ರೈಫಲ್ಸ್ ತುಕಡಿ ಜಮ್ಮು-ಕಾಶ್ಮೀರ ಪೋಲಿಸ್ ಪಡೆ, ಇಂಡೊ-ಟಿಬೇಟಿಯನ್, ಬಾರ್ಡರ್‌ಪೋಲಿಸ್ ಪಡೆಗಳನ್ನು ಭಾರಿ ದಾಳಿಯ ನಡುವೆಯು ಭೇದಿಸಿ ಮುನ್ನಡೆದ ಉಗ್ರಗಾಮಿಗಳು ಸೇನೆಯ ಎರಡು ಕಟ್ಟಡದೊಳಗೆ ನುಗ್ಗಿ ಗೇಟಿನ ಬಳಿ ನಡೆದ ಕಾದಾಟದಲ್ಲಿ ಒಬ್ಬ ಉಗ್ರಗಾಮಿ ಹಾಗೂ ಗಡಿ ಪ್ರದೇಶದಲ್ಲಿದ್ದ ತಾಯಿ ಮಗಳಿಬ್ಬರು ಅಸುನೀಗಿದರು.

ಕಟ್ಟಡದೊಳಗೆ ಅವಿತು ಗುಂಡು ಹಾರಿಸುತ್ತಿದ್ದ ದುಷ್ಕರ್ಮಿಗಳನ್ನು ಸೇನಾಪಡೆ ಎಡೆಬಿಡದೆ ಪ್ರತಿದಾಳಿ ನಡೆಸಿತಾದರು ಉಗ್ರಗಾಮಿಗಳ ಗುಂಡಿನ ಮಳೆಗೆ ಪ್ರತಿದಾಳಿಯು ಮುಂಚೂಣಿ ಯಲ್ಲಿದ್ದ ಮೇಜರ್ ಮುತ್ತಣ್ಣ ಬಲಿಯಾದರು. ಮುಂಜಾನೆಯ ತನಕ ಕತ್ತಲಲ್ಲಿ ನಡೆದ ಈ ಸಮರದಲ್ಲಿ ದುಷ್ಕರ್ಮಿಗಳಿಬ್ಬರು ಹತರಾದರು. ಸೇನಾ ಕಟ್ಟಡಗಳು ಪೂರ್ತಿಯಾಗಿ ದಾಳಿಯಲ್ಲಿ ನಷ್ಟವಾಗಿದೆ. ಉಗ್ರಗಾಮಿಗಳ ಶವವನ್ನು ಬೆಳಿಗ್ಗೆ ಹೊರತೆಗೆದು ಇಬ್ಬರನ್ನು ಅಬು ಅಬ್ದುಲ್ಲಾ, ಅಬು ಹರೂನ್ ಎಂದು ಗುರ್ತಿಸಲಾಯಿತು. ಗೇಟ್ ಸಮೀಪ ಮೃತ ಉಗ್ರಗಾಮಿಯ ಹೆಸರು ತಿಳಿದಿಲ್ಲ. ಈ ಸಂದರ್ಭದಲ್ಲಿ B.S.F. ಯೋಧನೊಬ್ಬನಿಗೆ ಏಟು ಬಿದ್ದಿದೆ.

ಸೇನಾವಾಹನದಲ್ಲಿ ಮಡಿಕೇರಿಗೆ ಆಗಮಿಸಿದ ಪಾರ್ಥಿವ ಶರೀರವನ್ನು ಸಕಲ ಸರ್ಕಾರಿ ಮರ್ಯಾದೆಯೊಂದಿಗೆ ಬರಮಾಡಿ ಕೊಂಡು ಮಡಿಕೇರಿ ಪುರಭವನದಲ್ಲಿ ಸಾರ್ವಜನಿಕರ ದರ್ಶನಕ್ಕಾಗಿ ಇಡಲಾಗಿತ್ತು. ಜಿಲ್ಲೆಯ ಉಸ್ತುವಾರಿ ಸಚಿವ ಯಂ. ಯಂ. ನಾಣಯ್ಯ, ಮಾಜಿ ಉಸ್ತುವಾರಿ ಸಚಿವ ಯಂ. ಸಿ. ನಾಣಯ್ಯ, ಜಿಲ್ಲಾದಿಕಾರಿ ಅರಸ್, ಸಚಿವ ಟಿ. ಜಾನ್, S. P. ರವೀಂದ್ರ ಪ್ರಸಾದ್ ಸೇರಿದಂತೆ ಹಲವಾರು ಗಣ್ಯರು ಪುಷ್ಪಗುಚ್ಚವಿರಿಸಿ ನಮನ ಸಲ್ಲಿಸಿದರು.

## ಕರ್ತವ್ಯಕ್ಕೆ ತೆರಳುತ್ತಿದ್ದಂತೆ ರೈಲಿಗೆ ಸಿಕ್ಕಿ ಅಪ್ಪಚ್ಚಿ

ಇಬ್ಬರು ಯೋಧರನ್ನು ಕಳಕೊಂಡ ಕೊಡಗು ಜಿಲ್ಲೆ ಇನ್ನೊಬ್ಬ ಯೋಧನನ್ನು ಒಂದೇ ವಾರದೊಳಗೆ ಕಳಕೊಂಡಿತು.



ಯೋಧ ರಘ್ರಾಕ್ ಮಿಲಿಟರಿವಾಹನ ಮಗುಚಿ ಸಾವನ್ನಪ್ಪಿದರೆ, ಮತ್ತೋರ್ವ, ಮೇಜರ್ ಮುತ್ತಣ ಕಾಶ್ಮೀರದಲ್ಲಿ ಉಗ್ರಗಾಮಿಗಳ ಗುಂಡೇಟಿಗೆ ಬಲಿಯಾಗಿ ಮಡಿಕೇರಿಗೆ ತಲುಪುವ ಮುಂಚೆಯೇ ಉತ್ತರ ಕೊಡಗಿನ ಯೋಧನೊಬ್ಬ ಕರ್ತವ್ಯಕ್ಕೆ ಹೋಗುವಾಗ ರೈಲಿನಲ್ಲಿ ಆಯತಪ್ಪಿ ಬಿದ್ದು ಮೃತಪಟ್ಟಿದ್ದು ನಿಜವಾಗಲೂ ಅಘಾತವಾಗಿದೆ.



ಸೋಮವಾರ ಪೇಟೆಯಿಂದ 10 ಕಿ.ಮೀ. ದೂರವಿರುವ ಸಿಂಗನಹಳ್ಳಿ ಗ್ರಾಮದ ನಿವಾಸಿ ದಿ. ಸೋಮಯ್ಯ, ಮತ್ತು ದಿ. ಪುಟ್ಟಮ್ಮ ದಂಪತಿಗಳ ನಾಲ್ಕುಜನ ಮಕ್ಕಳಲ್ಲಿ 2ನೇಯವರಾಗಿರುವ ಈರಪ್ಪನವರ ಜನನ. 2 ವರ್ಷದವರಾಗಿದ್ದಾಗಲೇ ತಂದೆ ತಾಯಿಯನ್ನು ಕಳಕೊಂಡ ಅನಾಥರು. ಆ ಸಂದರ್ಭದಲ್ಲಿ ಈರಪ್ಪನವರ ಸಂಬಂಧಿ ಡಿ. ಕೆ. ನಿಂಗಪ್ಪನವರು ಈತನ ಜವಾಬ್ದಾರಿ ವಹಿಸಿಕೊಂಡು S.S.L.C. ತನಕ ವ್ಯಾಸಂಗ ಮಾಡಿಸಿದರು.

1978ರಲ್ಲಿ ಮಿಲಿಟರಿ ಆಯ್ಕೆ ಸಮಿತಿಯು ಮಡಿಕೇರಿಯ ಸುದರ್ಶನ ಅತಿಥಿಗೃಹದ ಬಳಿ ಸೈನ್ಯಕ್ಕೆ ನೇಮಕಾತಿಗಾಗಿ ಪ್ರಕಟಣೆ ನೀಡಿತ್ತು. ಮೊದಲಿನಿಂದಲೂ ದೇಶ ರಕ್ಷಣೆಗೆ ಸೇರಬೇಕೆಂಬ ಅತೀವ ಆಸೆಯಿಂದ ಆಯ್ಕೆ ಸಂದರ್ಶನಕ್ಕೆ ತೆರಳಿದ ಈರಪ್ಪ ಹತ್ತು ದಿನವಾದರೂ ಊರಿಗೆ ಮರಳದೇ ಇದ್ದಾಗ ಇತ್ತ ಸಿಂಗನಳ್ಳಿಯಲ್ಲಿ, ಪೋಷಕರಾದ ನಿಂಗಪ್ಪ ಸಹೋದರ ಸಹೋದರಿಯರು ಆತಂಕಕ್ಕೊಳಗಾದರು. ಊರವರಿಗೂ ಚಿಂತೆಗೀಡು ಮಾಡಿತ್ತು. ಆದರೆ ಹನ್ನೊಂದನೇ ದಿನ ಊರಿಗೆ ಬಂದ ಟಪಾಲಿನಲ್ಲಿ ತಾನು ಮಡಿಕೇರಿ ಸಂದರ್ಶನದಲ್ಲಿ ಆಯ್ಕೆ ಆಗಿ ನೇರವಾಗಿ ವೆಲ್ಲಿಂಗ್‌ಟನ್ನ್‌ನ ಸೇನಾ ಶಿಬಿರಕ್ಕೆ ನೇಮಕ ಮಾಡಲಾಗಿದೆ ಎಂದು ಬರೆದ ಅಕ್ಷರ ನೋಡಿ ಇಡೀ ಗ್ರಾಮವೇ ಪುಳಕಿತವಾಯಿತಂತೆ.

13-12-1990ರಲ್ಲಿ ಶಾಂತಳ್ಳಿ ಸಮೀಪದ ಬೀಕಳ್ಳಿಯ ಮುತ್ತಣ್ಣ ಅವರ ಪುತ್ರಿ ಪುಷ್ಪಾಳನ್ನು ಜೀವನ ಸಂಗಾತಿಯನ್ನಾಗಿ ಆರಿಸಿದ ಈರಪ್ಪ ನಾಲ್ಕು ವರ್ಷದ ಮುದ್ದು ಮುದ್ದಾದ ಒಂದು ಗಂಡು ಮತ್ತು ಒಂದು ಹೆಣ್ಣು ಮಗುವಿನ ಅವಳಿ-ಜವಳಿ ಮಕ್ಕಳ ತಂದೆಯಾದರು.

ಸೇನೆಯಲ್ಲಿ ಸಲ್ಲಿಸಿದ ಸೇವಾ ಹಿರಿತನವನ್ನು ಪರಿಗಣಿಸಿ ಜೂನಿಯರ್ ಕಮೀಷನರ್ ಅಧಿಕಾರಿಯಾಗಿ ಪ್ರಸ್ತುತ ಅಸ್ಸಾಂನಲ್ಲಿ ಸೇವೆ ಸಲ್ಲಿಸುತ್ತಿದ್ದ ಈರಪ್ಪನವರು 1996ರಲ್ಲಿ ಮಿಲಿಟರಿ ಅಗ್ರಿಮೆಂಟ್ ಮುಗಿದು ಮನೆಗೆ ಹಿಂತಿರುಗಿದರಾದರೂ ಮನೆಯಲ್ಲಿ ಸುಮ್ಮನೆ ಕೂರುವುದಕ್ಕಿಂತ ತಾಯ್ನಾಡಿನ ರಕ್ಷಣೆಯೇ ಮುಖ್ಯವೆನ್ನುತ್ತಾ ಹೇಳಿ ಮತ್ತೆ ಸೇನೆಯಲ್ಲಿ ತೊಡಗಿಸಿಕೊಂಡರಾದರೂ, ಕರ್ತವ್ಯ ನಿರತನಾಗಿರುವಾಗಲೇ ವಿಧಿವಶರಾಗಿರುವುದು ವಿಧಿಯಾಟವಲ್ಲದೇ ಮತ್ತೇನು? ಜನಾಂಗದ ನಾಡಿನ ಮಮತೆಯ ಮಂಜ್ಞನಿಗೆ ಸಂಗಾತಿಯ ನಮನಗಳು.



## ಕುಶಾಲನಗರ ಗೌಡ ಸಮಾಜದಲ್ಲಿ ಜರುಗಿದ ಸಂತೋಷ ಕೂಟ

ಕುಶಾಲನಗರ ಗೌಡ ಮಹಿಳಾ ಒಕ್ಕೂಟ ಹಾಗೂ ಯುವಕ ಸಂಘದ ವತಿಯಿಂದ ದಿನಾಂಕ 9-1-2000ದಂದು ಗೌಡ ಜನಾಂಗದ ಸಂತೋಷ ಕೂಟವನ್ನು ಏರ್ಪಡಿಸಲಾಗಿತ್ತು.

ಆ ದಿನ ಬೆಳಿಗ್ಗೆ ಆಟೋಟ ಸ್ಪರ್ಧೆಯನ್ನು ಸ್ಥಳೀಯ ವಕೀಲರಾದ ತೆಕ್ಕಡೆ ಶ್ರೀ ನೇಮಿರಾಜುನವರು ಸಾಂಕೇತಿಕವಾಗಿ ಉದ್ಘಾಟಿಸಿದರು. ಅನಂತರ ನಡೆದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಹಲವಾರು ಕಾರ್ಯಕ್ರಮಗಳು ಉತ್ತಮವಾಗಿ ಪ್ರದರ್ಶಿಸ್ಪಟ್ಟಿತು.

ಸಭೆಯ ಅಧ್ಯಕ್ಷ ಸ್ಥಾನವನ್ನು ವಹಿಸಿದ ಕುಶಾಲನಗರ ಗೌಡ ಸಮಾಜದ ಅಧ್ಯಕ್ಷರಾದ ಕೋರನ ಶ್ರೀ ಪೂಣಚ್ಚನವರು ಮಾತಾನಾಡುತ್ತಾ ಜನಾಂಗ ಬಾಂದವರು ಮದುವೆ ಹಾಗೂ ಶೋಕ ಸಂದರ್ಭದಲ್ಲಿ ಕೆಲವು ಉಡುಗೆಗಳ ಸಂಪ್ರದಾಯವನ್ನು ಖಡ್ಡಾಯವಾಗಿ ಪಾಲಿಸಬೇಕೆಂದು ಸಭೆಯಲ್ಲಿ ವಿನಂತಿಸಿಕೊಂಡರು.

ಇದೇ ಪ್ರಥಮ ಬಾರಿ ಕುಶಾಲನಗರ ಗೌಡ ಸಮಾಜಕ್ಕಾಗಿ ದುಡಿದ ಹಿರಿಯ ವ್ಯಕ್ತಿಗಳನ್ನು ಸನ್ಮಾನಿಸಲಾಯಿತು. ಪೆರುಬಾಯಿ ಶ್ರೀ ಚಿಣ್ಣಪ್ಪನವರು, ಸೂದನ ಶ್ರೀ ಅಯ್ಯಪ್ಪನವರು, ಕೋಡಿ ಶ್ರೀ ಸುಭಾಷ್‌ನವರು, ಬಿಟ್ಟೀರ ಶ್ರೀಮತಿ ಅಮ್ಮಾಜಿಯವರು, ಡಾ. ಕೆ. ಪಿ. ಬೋಪಣ್ಣನವರನ್ನು ಸನ್ಮಾನಿಸಲಾಯಿತು.

ಸ್ವಾಗತ ಸಮಿತಿಯಲ್ಲಿ ಯುವಕ ಸಂಘದ ಅಧ್ಯಕ್ಷರಾದ ಪೊನ್ನಚ್ಚನ ಶ್ರೀ ಮೋಹನವರು, ಕುದುಪಜೆ ಶ್ರೀಮತಿ ಶಾಂತಿ ಬೋಜಪ್ಪನವರು, ಉಪಾಧ್ಯಕ್ಷಿಣಿಯಾಗಿ, ಕಾರ್ಯದರ್ಶಿಯಾಗಿ ಹೊಸೋಕ್ಲು ಶ್ರೀ ಉತ್ತಪ್ಪನವರು, ಖಜಾಂಚಿಯಾಗಿ ನಡುವಟ್ಟಿರ ಶ್ರೀ ಮೋಹನ್ ಈರಪ್ಪನವರು ಉಪಸ್ಥಿತರಿದ್ದರು.

ಸಾಮಾಜಿಕ ಬೋಜನದ ನಂತರವೂ ಸಾಂಸ್ಕೃತಿಕ ಕಾರ್ಯಕ್ರಮ ಹಾಗೂ ಆಟೋಟ ಸ್ಪರ್ಧೆಗಳು ನಡೆಯಿತು. ಕಾರ್ಯಕ್ರಮವನ್ನು ಅಚ್ಚುಕಟ್ಟಾಗಿ ಕೊಡಗನ ಶ್ರೀ ರಮೇಶನವರು ನಿರೂಪಿಸಿದರು.

ಸಾವಿರಕ್ಕೂ ಮಿಕ್ಕಿ ನೆರೆದಿದ್ದ ಕುಲ ಬಾಂದವರು ಬೆಳಿಗ್ಗೆಯಿಂದ ಸಂಜೆ ತನಕ ತುಂಬಾ ಉತ್ಸಾಹದಿಂದಲೇ ಕಾರ್ಯಕ್ರಮದಲ್ಲಿ ಭಾಗವಹಿಸಿದರು.

ವರದಿ : ಕುಂಭಗೌಡನ ಸೋಮಣ್ಣ, ಕುಶಾಲನಗರ



# ವ್ಯಕ್ತಿ ಪರಿಚಯ : 1982ರ ಮೆರಾಥಾನ್ ವೀರ ಹೊಸೂರು ಕುಕ್ಕಪ್ಪ ಸೀತಾರಾಮ



ಸಾಧನೆಯೇ ಮನುಷ್ಯನಿಗೆ ಸಿಗುವ ಜೀವಮಾನದ ಅತ್ಯುನ್ನತ ಪದವಿ. ಪ್ರತಿಯೊಬ್ಬ ಮನುಷ್ಯನು ತನ್ನತನ್ನ ಜೀವಿತದ ದಿನಗಳಲ್ಲಿ ಏನಾದರೂ ಸಾಧಿಸಿಯೇ ತೀರುತ್ತಾನೆ. ಏನಿಲ್ಲವೆಂದರೂ ತಿನ್ನುವ ಅನ್ನಕ್ಕಾಗಿಯಾದರೂ ಸಾಧಿಸುತ್ತಾನೆ. ಭಿಕ್ಷುಕನ ಕನಸು ತಿನ್ನುವ ಅನ್ನಕ್ಕಾದರೆ ಶ್ರೀಮಂತನ ಸಾಧನೆ ಹೇರಳ ಹಣ ಗಳಿಸುವುದು, ಅಲ್ಲದೆ ತನಗೆ ಜೀವಮಾನದಲ್ಲಿ ಒಳ್ಳೆಯ ಹೆಸರು ಬರಲೆಂದು ಚಿಂತಿಸುತ್ತಾರೆ. ಹೀಗೆ ಬಿಕ್ಷುಕ ಮತ್ತು ಶ್ರೀಮಂತನ ಸಾಧನೆಗಳ ಮದ್ಯ ಇನ್ನು ಹಲವಾರು ಸಾಧನೆಗಳು ತುಂಬಿಕೊಂಡಿವೆ.

ಇಂತಹ ಸಾಧನೆಗಳಲ್ಲಿ ಕ್ರೀಡೆಯೂ ಒಂದು. ಕ್ರೀಡೆಯಲ್ಲಿಯೂ ಹಲವಾರು ರೀತಿಯವುಗಳಿವೆ. ಕೆಲವು ಒಂದು ಕ್ಷಣದ್ದಾಗಿದ್ದರೆ, ಇನ್ನೊಂದು ದಿನವಿಡೀ ನಡೆಯುವುದಾಗಿರುತ್ತದೆ. ಈ ಎರಡರ ಮಧ್ಯೆ ಇರುವ ಒಂದು ಕ್ರೀಡೆಯೇ ಓಟ. ಓಟ ಎಂದೊಡನೆ ನಮಗೆ ತಟ್ಟನೆ ಹೊಳೆಯುವುದು ನಮ್ಮ ಜನಾಂಗದ ಒಬ್ಬ ಎಲೆಮರೆಯಕಾಯಿ, ನಮ್ಮ ನಿಮ್ಮ ಮಧ್ಯೆ ಅತೀ ಸರಳ ಜೀವನ ನಡೆಸುವ, ಹಾಗೂ ಪ್ರಚಾರ ಒಲ್ಲದ ವ್ಯಕ್ತಿ, ಅವರೇ ತಾವು ನಾಡಿನ ಹೊಸೂರು ಮನೆತನದಲ್ಲಿ ಹುಟ್ಟಿದ ಕುಕ್ಕಪ್ಪನವರ ದ್ವಿತೀಯ ಪುತ್ರ. 1982ರಲ್ಲಿ ದೆಹಲಿ ಏಷ್ಯಾಡ್‌ನ ಮ್ಯಾರಥಾನ್‌ನಲ್ಲಿ ನಮ್ಮ ದೇಶಕ್ಕೆ, ರಾಜ್ಯಕ್ಕೆ, ಜಿಲ್ಲೆಗೆ, ಹಾಗೂ ಜನಾಂಗಕ್ಕೆ ಹೆಸರು ತಂದು ಕೊಟ್ಟ ಶ್ರೀಮಂತ ಹೃದಯಿಯಾದ ಶ್ರೀ ಹೆಚ್. ಕೆ. ಸೀತಾರಾಮ್.

1982ರಲ್ಲಿ 9ನೇ ಏಷ್ಯನ್ ಕ್ರೀಡಾಕೂಟದ ಮ್ಯಾರಥಾನ್ ವಿಭಾಗದಲ್ಲಿ 42.195 ಕಿ.ಮೀ. ದೂರವನ್ನು ಮಟಮಟ ಮಧ್ಯಾಹ್ನದ ಸುಡುಬಿಸಿಲಿನಲ್ಲಿ ಕಾಲಿಗೆ ಕವಚವಿಲ್ಲದೆ ಬರಿಕಾಲಿನಲ್ಲೆ ಓಡಿ ದೇಶಕ್ಕೂ ಮತ್ತು ನಾಡಿನ ಅರೆಭಾಷಿಕ ಜನಾಂಗಕ್ಕೆ ಕೀರ್ತಿ ತಂದ ಹೊಸೂರು ಕುಕ್ಕಪ್ಪ ಸೀತಾರಾಮನವರು ಈವರೆಗಿನ ಮಾರಥಾನ್‌ನಲ್ಲಿ ಕಂಡ ಅತ್ಯುನ್ನತ ಕ್ರೀಡಾಪಟುಗಳಲ್ಲಿ ಒಬ್ಬರಾಗಿದ್ದಾರೆ.

12-8-1953ರಲ್ಲಿ ಕೊಡಗು ಜಿಲ್ಲೆಯ ತಾವ್‌ನಾಡಿನ (ಭಾಗಮಂಡಲ) ಚೇರಂಗಾಲ ಗ್ರಾಮದ ದಿ. ಹೊಸೂರು ಕುಕ್ಕಪ್ಪನವರ ದ್ವಿತೀಯ ಪುತ್ರರಾಗಿ ಜನನ. ಕಡು ಬಡತನದಿಂದ ಬೆಳೆದ ಇವರು ಶಾಲಾ ದಿನಗಳಲ್ಲಿ ಕ್ರೀಡೆಯಲ್ಲಿ ಹೆಚ್ಚು ಆಸಕ್ತಿ ವಹಿಸಿದ್ದರು. 1973ರಲ್ಲಿ ಭಾಗಮಂಡಲ ಕಾವೇರಿ ಪದವಿ ಪೂರ್ವ ಕಾಲೇಜಿನಲ್ಲಿ ವ್ಯಾಸಂಗವನ್ನು ಪೂರ್ಣಗೊಳಿಸಿ ಭಾರತೀಯ ಭೂದಳಕ್ಕೆ ಸೇರ್ಪಡೆಗೊಂಡರು, ಶಾಲಾ ಕಾಲೇಜುಗಳಲ್ಲಿ 800, 1500, ಮೀಟರ್ ಓಟದಲ್ಲಿ ಹೆಚ್ಚಿನ ಆಸಕ್ತಿವಹಿಸಿ ಅಂತರ ಪ್ರೌಢಶಾಲೆಯ ಮತ್ತು ಕಾಲೇಜು ಮಟ್ಟದಲ್ಲಿ ಭಾಗವಹಿಸಿ ಮೊದಲಿಗರಾಗಿದ್ದಾರೆ. ಜನರಿಂದ ಇವರಿಗೆ ಪ್ರೋತ್ಸಾಹದ ಕೊರತೆಯಿದ್ದರೂ ಉತ್ಸಾಹಕ್ಕೇನು ಕಮ್ಮಿಯಿರಲಿಲ್ಲ. 1973ರಲ್ಲಿ ಸೇನೆಗೆ ಆಯ್ಕೆ ಆದನಂತರ ಕ್ರೀಡಾಸಕ್ತಿಯನ್ನು ಸಾಕಷ್ಟು ಹೆಚ್ಚಿಸಿಕೊಂಡ ದೀಮಂತ ವ್ಯಕ್ತಿತ್ವ ಇವರದು.

ಇವರು ಪ್ರಸಕ್ತ ಮೈಸೂರಿನ ದಕ್ಷಿಣವಲಯ ರೈಲ್ವೆಯಲ್ಲಿ ಉದ್ಯೋಗಿಯಾಗಿದ್ದಾರೆ. ಬೆಂಗಳೂರಿನಲ್ಲಿ ಇದ್ದಾಗ N.I.S. ಕ್ಯಾಂಪ್‌ನಲ್ಲಿ ಉಚ್ಚಮಟ್ಟದ ಕ್ರೀಡಾ ಶಿಕ್ಷಣದ ತರಬೇತಿಗಾಗಿ ಆಯ್ಕೆಯಾಗಿದ್ದರು. ಕ್ರೀಡಾಲೋಕದ ಧ್ರುವತಾರೆಯಾದ ಸೀತಾರಾಮರು ತನ್ನ ಪ್ರತಿಭೆಯ ಬಗ್ಗೆ ಎಂದೂ ಉಬ್ಬಿದವರಲ್ಲ. ಸಾಕಷ್ಟು ಯುವ ಕ್ರೀಡಾ ಪಟುಗಳನ್ನು ಗುರ್ತಿಸಿ ಹೆಚ್ಚಿನ ನೆರವನ್ನು ನೀಡಿದ್ದಾರೆ. ಶ್ರೀಯುತರು 1987ರಿಂದ ಇಂಡಿಯನ್ ರೈಲ್ವೆಯ ತರಬೇತು ದಾರರಾಗಿ (ಕೋಚ್)ಕಾರ್ಯನಿರ್ವಹಿಸುತ್ತಿರುವರು.

1982ರ 9ನೇ ಏಷ್ಯಾಡ್‌ನಲ್ಲಿ ಚಿನ್ನದ ಪದಕದ ನಿರೀಕ್ಷೆಯಲ್ಲಿ ಇದ್ದು, ಇವರಿಗೆ ದೊರೆತ ಕಾಲ್ಕವಚದ ಅಳತೆ ದೊಡ್ಡಾದಾಗಿದ್ದು ಕಾಲ್ಕವಚವಿಲ್ಲದೆ ಓಡುವ ಅನಿವಾರ್ಯತೆಯಿಂದ ತಾನು ಬರಿ ಕಾಲಿನಲ್ಲೆ ಓಡಬೇಕಾಗಿ ಬಂದಿದ್ದರಿಂದ, ಅಲ್ಲದೆ ಓಡುವಾಗ ಶ್ರೀಯುತರಿಗೆ ಮಾರ್ಗಮಧ್ಯದಲ್ಲಿ ಕಾಣಿಸಿಕೊಂಡ ಹೊಟ್ಟೆನೋವಿನಿಂದಾಗಿ, ಓಟವನ್ನು ಅರ್ಧದಲ್ಲಿಯೇ ನಿಲ್ಲಿಸದೆ ಓಡಿ ಕಂಚಿನ ಪದಕಕ್ಕೆ ತೃಪ್ತಿಪಡುವಂತಾಯಿತು. ಇದನ್ನು ಸ್ಮರಿಸುವಾಗ ಶ್ರೀಯುತರು ದುಃಖಿತರಾಗುತ್ತಾರೆ. ಕ್ರೀಡಾ ಜೀವನದ ಅತ್ಯುನ್ನತ ಶಿಖರವನ್ನು ತಲುಪುವಲ್ಲಿ ವಿಫಲನಾದೆಯೆನ್ನುತ್ತಾರೆ. ಕೊಡಗು ಸಂಗಾತಿ ಶ್ರೀಯುತರನ್ನು ಸಂಪರ್ಕಿಸಿದಾಗ ಸಂಗಾತಿಯ ಕೆಲವು ಪ್ರಶ್ನೆಗಳಿಗೆ ಉತ್ತರಿಸಿದರು.

1. ನಿಮಗೆ ಏಷ್ಯಾಡ್‌ನಂತಹ ದೊಡ್ಡಕ್ರೀಡೆಯಲ್ಲಿ ಭಾಗವಹಿಸಿ ದೇಶಕ್ಕೆ ಪದಕ ಪಡಕೊಂಡಾಗ ನಿಮಗೇನನ್ನಿಸಿತು?

ಉ. ಈ ಹಿಂದೆ ನಾನು ಇದಕ್ಕೆ ತೆಗೆದುಕೊಂಡ ಕಡಿಮೆ ಸಮಯದಲ್ಲಿ ಗುರಿಮುಟ್ಟುತ್ತಿದೆ. ಅದುದರಿಂದ ಇದು ನನಗೆ ಅಷ್ಟೊಂದು ತೃಪ್ತಿತಂದಿಲ್ಲ.

2. ಪದಕದೊಂದಿಗೆ ಹುಟ್ಟೂರಿಗೆ ಆಗಮಿಸಿದಾಗ ನಿಮ್ಮನ್ನು ಯಾರ್‍ಯಾರು ಸನ್ಮಾನಿಸಿದರು?

ಉ. ನನ್ನನ್ನು 10ರಿಂದ15ಕಡೆಗಳಲ್ಲಿ ಸನ್ಮಾನಿಸಲಾಯಿತು. 1983ರಲ್ಲಿ ದೇಶದ ಅಧ್ಯಕ್ಷರಾಗಿದ್ದ ಗ್ಯಾನಿ ಜೇಲ್‌ಸಿಂಗ್ ಹಾಗೂ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾಗಾಂಧಿಯವರು ಸನ್ಮಾನಿಸಿದರು. ನಂತರ ಬೆಂಗಳೂರಿನ ಗೌಡ ಸಮಾಜದವರು, ಮಡಿಕೇರಿಯ ವಿದ್ಯಾಸಂಘದವರು, ಮೈಸೂರಿನ ನಮ್ಮ ಜನಾಂಗದವರು, ಮೈಸೂರಿನ ಸ್ಪೋರ್ಟ್ಸ್



ಕ್ಲಬ್‌ನವರು, ಸುಳ್ಯದಲ್ಲಿಯೂ ಕೊಡಗಿನ ಸಿದ್ದಾಪುರದ ಮೂಲನಿವಾಸಿಗಳ ಸಂಘದ ವತಿಯಿಂದ, ಕೊಡಗಿನ ಆಗಿನ ಜಿಲ್ಲಾಧಿಕಾರಿಗಳು, ಅಲ್ಲದೆ ಬ್ರಹ್ಮಗಿರಿ ಪತ್ರಿಕೆಯವರು ನನ್ನನ್ನು ಕೊಡಗಿನ ಜನತೆಗೆ ಪತ್ರಿಕೆಯ ಮುಖಾಂತರ ಪ್ರಚಾರ ಪಡಿಸಿದರು. ಹೀಗೆ ಹತ್ತಾರು ಕಡೆ ಸನ್ಮಾನಿಸಲಾಯಿತು.

3. ನಿಮಗೆ ಪದಕ ದೊರೆತು ಸಾಕಷ್ಟು ಸಮಯವಾಗಿದೆ, ನಿಮ್ಮ ಕಿರಿಯರಿಗೆ ನಿಮ್ಮ ಸಲಹೆಯೇನು?

ಉ. ನನ್ನ ಹಾಗೆ ಪ್ರಯತ್ನ ಪಟ್ಟು ಮುಂದೆ ಬರಬೇಕು. ನಮ್ಮಲ್ಲಿ ಕ್ರೀಡಾ ಮನೋಭಾವನೆ ಕಮ್ಮಿಯೇನಿಲ್ಲ. ಯುವಕರು ಮುಂದೆ ಬರುತ್ತಿಲ್ಲ ಅಷ್ಟೇ. ಮುಂದೆ ಬಂದಲ್ಲಿ ನನ್ನ ಸಲಹೆ ಸೂಚನೆ ಹಾಗೂ ಮಾರ್ಗದರ್ಶನ ಖಂಡಿತ ಇದ್ದೇ ಇದೆ.

4. ನೀವು ಪದಕ ಪಡೆದುದಕ್ಕೆ ಸರ್ಕಾರದಿಂದ ಏನಾದರೂ ಪ್ರತಿಫಲ ಸಿಕ್ಕಿದೆಯೇ?

ಉ. ನನಗೆ ಪುಕ್ಕಟೆಯಾಗಿ ಯಾವ ಪ್ರತಿಫಲ ಸಿಕ್ಕಿಲ್ಲ. ಬೇರೆಯವರಿಗೆ ಹೋಲಿಸಿದರೆ ನನಗೇನು ಸಿಕ್ಕಿಲ್ಲ. ನನಗೆ ಸಿಕ್ಕಿದ 30 × 23 ಅಳತೆಯ ಈಗಿರುವ ಮನೆಗೆ ನಾನು 1983ರಲ್ಲಿ ಪೂರ್ತಿ ಹಣ ಪಾವತಿಸಿ ಪಡಕೊಂಡಿರುತ್ತೇನೆ. ಅಂದಿನ ಗುಂಡೂರಾವ್ ಸರ್ಕಾರ ಘೋಷಿಸಿದ್ದ 25,000/- ರೂಪಾಯಿಗಳಲ್ಲಿ ನನ್ನ ಕೈಗೆ ದೊರೆತದ್ದು ಕೇವಲ 10,000/- ರೂಪಾಯಿಗಳು ಮಾತ್ರ. ಇಷ್ಟು ಬಿಟ್ಟರೆ ನನಗೇನು ದೊರೆತಿಲ್ಲ.

5. ನಿಮ್ಮ ಸಂಸಾರಿಕ ಜೀವನದ ಬಗ್ಗೆ ಸ್ವಲ್ಪ ತಿಳಿಸುತ್ತೀರಾ?

ಉ. ನಾನು ಮದುವೆಯಾಗಿದ್ದು ಪರಿವಾರಮನೆ ಶಿವರಾಮನವರ ಮಗಳನ್ನು. ಪತ್ನಿಯ ಹೆಸರು ಶಕುಂತಳ, ನನಗೆ ಒಂದು ಹೆಣ್ಣು, ಒಂದು ಗಂಡು ಮಗ. ಮಗಳು ಕೋಮಲ ಒಂದನೇ ತರಗತಿಯಲ್ಲಿಯೂ ಮಗ ಮಹೇಂದ್ರಕುಮಾರ್ 3 ವರ್ಷದವನಾಗಿ ಶಿಶುವಿಹಾರದಲ್ಲಿ ಓದುತ್ತಿದ್ದಾನೆ.

6. ನಿಮ್ಮ ಮುಂದಿನ ಗುರಿಯೇನು?

ಉ. ಯುವಕರು, ಯುವತಿಯರು ಮುಂದೆ ಬಂದರೆ ಅವರಿಗೆ ನನ್ನ ಸಹಕಾರ ಇದೆ. ಜನಾಂಗದವರು ನಮ್ಮ ಯುವಕರಿಗೆ **15ರಿಂದ 20ದಿನಗಳ ಸ್ಪೋರ್ಟ್ಸ್ ಕ್ಯಾಂಪ್‌ಅನ್ನು ಮೈಸೂರಿನಲ್ಲಿ ನಡೆಸಲು ಏರ್ಪಾಟು ಮಾಡಿದರೆ ನನ್ನ ಪೂರ್ಣ ಸಹಕಾರವಿದೆ. ಖಂಡಿತ ಸಹಕರಿಸುತ್ತೇನೆ.**

7. ಸಂಗಾತಿ ಬಗ್ಗೆ ನಿಮ್ಮ ನಿಲುವೇನು?

ಜನಾಂಗಕ್ಕೆ ಅತ್ಯವಷ್ಯಕವಾದ ಪತ್ರಿಕೆ. ಇದರಿಂದ ಜನಾಂಗದೊಳಗೆ ಪರಿಚಯ, ಸಂಘಟನೆಯಾಗುತ್ತದೆ. ಜನಾಂಗಕ್ಕೆ ಒಗ್ಗಟ್ಟು ಮೂಡುತ್ತದೆ, ಅಲ್ಲದೆ ಮುಂದಿನ ಪೀಳಿಗೆಗೆ ಅಮೂಲ್ಯವಾದ ಕೊಡುಗೆಯಾಗಿದೆ. ಮಾಧ್ಯಮದ ಅವಶ್ಯಕತೆ ಬಹಳಷ್ಟು ಜನಾಂಗಕ್ಕೆ ಇರುವುದರಿಂದ ಇದನ್ನು ನಾವೆಲ್ಲರೂ ಬೆಳೆಸಬೇಕು.

ಶ್ರೀಯುತರು ದಕ್ಷಿಣ ರೈಲ್ವೆಯ ಕೋಚಿಂಗ್ ಕ್ಯಾಂಪ್ ಮುಖ್ಯಸ್ಥರಾದ್ದರಿಂದ ಮುಂದೆ ಚಂದಿಗಡದಲ್ಲಿ ನಡೆಯಲಿರುವ ರೈಲ್ವೆ ಕ್ರೀಡೆಗೆ ತಯಾರಿಯಲ್ಲಿದ್ದು ರಾತ್ರಿ 8-30ಕ್ಕೆ ಕೋಚಿಂಗ್ ಕ್ಯಾಂಪ್‌ನಲ್ಲಿ ಇರಬೇಕಾಗಿದೆಯೆಂದು ರಾತ್ರಿ ಸುಮಾರು 9ಗಂಟೆಯವರೆಗೆ ನಮ್ಮೊಡನೆ ಸಹಕರಿಸಿ ಸ್ವಲ್ಪವೂ ಸಮಯ ಹಾಳುಗೆಡವದೆ ಹೊರಟು ಕೋಚಿಂಗ್ ಕ್ಯಾಂಪ್ ಕಡೆ ಪ್ರಯಾಣಿಸಿದರು. ಇವರಿಗೆ ನಮ್ಮ ಕುಲದೇವರು, ಸಕಲ ಆಯುರಾರೋಗ್ಯ ಭಾಗ್ಯ ಸಿದ್ದಿಸಿ ಮುಂದೆ ಇನ್ನೂ ಹೆಚ್ಚಿನ ಯಶಸ್ಸನ್ನು ನಾಡಿಗೆ ಹಾಗೂ ಜನಾಂಗಕ್ಕೆ ತರಲಿ ಎಂದು ಸಂಗಾತಿ ಹಾರೈಸುತ್ತದೆ.

**ಶ್ರೀ ಸೀತಾರಾಮರು ನಿಜ ಜೀವನದಲ್ಲಿ ಬಡ ಕುಟುಂಬದಿಂದ ಬಂದು ದೇಶದ ಕೀರ್ತಿ ಪತಾಕೆಯನ್ನು ಎತ್ತಿ ಹಾರಿಸಿದವರು. ಈ ವೀರನ ಬಾಳು ಈಗಲೂ ಸಹ ಸುಗಮವಾಗಿರುವುದಿಲ್ಲ. 1982ರ ನಂತರ ಕರ್ನಾಟಕ ಸರ್ಕಾರದ 10ಸಾವಿರ ರೂಪಾಯಿಗಳ ಕಾಣಿಕೆ ಅಲ್ಲದೆ ಬೇರೇನು ಪಡೆಯದೆ ಇರುವ, ಈಗಿರುವ 23 × 30 ಅಡಿಗಳ ಚಿಕ್ಕದೊಂದು ಮನೆಗೆ ಸರ್ಕಾರಕ್ಕೆ 31ಸಾವಿರ ರೂಪಾಯಿಗಳ ಬೆಲೆ ತೆತ್ತು ಅಂದು ಪಡೆದ ಮನೆಯಲ್ಲಿಯೇ ಇಂದಿಗೂ ಸಹ ವಾಸವಾಗಿರುವ ಸೀತಾರಾಮರ ಬದುಕಿನ ಶೈಲಿ ಬಹಳ ಸರಳ ಮತ್ತು ಬಡತನದ ಜೀವನವಾಗಿದೆ. ಕ್ರಿಕೆಟ್ ಆಟಗಾರರು ಲಕ್ಷಾಂತರ ರೂಪಾಯಿಗಳ ಸಂಭಾವನೆ ಪಡೆದು ಮೆರೆದಾಡುವ ಈ ಸಂದರ್ಭದಲ್ಲಿ ಸೀತಾರಾಮನಂತಹ ವೀರ ಯೋಧ ದೇಶಕ್ಕೆ ಕೀರ್ತಿ ತಂದ ವಿಚಾರದಲ್ಲಿ ಇಷ್ಟು ಬೇಗ ನಾಡಿನ ಜನತೆ ಹಾಗೂ ಸರ್ಕಾರ ಮರೆತು ಕುಳಿತಿರುವುದು ನಿಜಕ್ಕೂ ಶೋಚನೀಯ ಸಂಗತಿಯೆಂದು ಸಂಗಾತಿಗೆ ಅನಿಸಿದೆ.**

**ಬರಹ : ತಡಿಯಪ್ಪನ ಕುಮಾರ ಜಯ**
**ಸಂದರ್ಶನ : ಪಟ್ಟಡ ಪ್ರಭಾಕರ**

**ಮೆರಥಾನ್‌ವೀರ ಅರೆಭಾಷಿಕರ ಸುಪುತ್ರನ ಸಾಧನೆ**

1. 1977ರಲ್ಲಿ ಭೂದಳದ ಪೂರ್ವಕಮಾಂಡಿನ (Eastern Command)ವತಿಯಿಂದ ಮುಂಬೈಯಲ್ಲಿ ಸರ್ವಿಸಸ್‌ನ ಕ್ರಾಸ್ ಕಂಟ್ರಿ ಓಟದಲ್ಲಿ 14.5 K.M.ನಲ್ಲಿ ಚಿನ್ನದ ಪದಕ.
2) ಉದಯಪುರದ ಜಪಾನ್ ನ್ಯಾಷನಲ್ ಕ್ರಾಸ್ ಕಂಟ್ರಿ ಓಟದಲ್ಲಿ ಕೂದಲೆಳೆಅಂತರದಲ್ಲಿ ಚಿನ್ನದ ಪದಕದಿಂದ ವಂಚಿತರಾಗಿ ಬೆಳ್ಳಿಪದಕಕ್ಕೆ ತೃಪ್ತಿ.
3) 1979ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ D.A.C. ಆಶ್ರಯದಲ್ಲಿ ನಡೆದ ರಾಷ್ಟ್ರ ಮಟ್ಟದ ಕ್ರೀಡಾಕೂಟದಲ್ಲಿ 5000ಮತ್ತು 10000 ಮೀಟರ್‌ನಲ್ಲಿ ನೂತನ ದಾಖಲೆ.
4) 1980ರಲ್ಲಿ ಶ್ರೀನಗರದ ರಾಷ್ಟ್ರೀಯ ಕ್ರಾಸ್ ಕಂಟ್ರಿ ಓಟದಲ್ಲಿ ಬೆಳ್ಳಿಪದಕ.
5) 1981ರಲ್ಲಿ ಕೇರಳದ ಕ್ಯಾಲಿಕಟ್‌ನಲ್ಲಿ ನಡೆದ ರಾಷ್ಟ್ರ ಮಟ್ಟದ ಮೆರಥಾನ್ ಓಟದಲ್ಲಿ ಚಿನ್ನದ ಪದಕ.
6) 1982ರಲ್ಲಿ ಭಾರತೀಯ ರೈಲ್ವೆ ಕ್ರಾಸ್ ಕಂಟ್ರಿ ಓಟದಲ್ಲಿ ಪ್ರಥಮ ಸ್ಥಾನ.
7) 1982ರಲ್ಲಿ ಮದ್ರಾಸಿನಲ್ಲಿ ನಡೆದ ರಾಷ್ಟ್ರಮಟ್ಟದ ಕ್ರಾಸ್ ಕಂಟ್ರಿ ಓಟದಲ್ಲಿ ದ್ವಿತೀಯ ಸ್ಥಾನ.

20ನೇ ಪುಟಕ್ಕೆ



# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

(ಹಿಂದಿನ ಸಂಚಿಕೆಂದ) ಧಾರಾವಾಹಿ - 3

ಆದಿನ ರಾತ್ರಿ ಮನೆಯವು ಎಲ್ಲಾ ಖಾಲಿ ಹೊಟ್ಟೆಲೇ ಮಲಗಿ ನಿದ್ದೆ ಹೋಗಿದ್ದೊ. ಆದ್ರೆ ಮಂಜ ರಾಜು ಮಾತ್ರ ಕರಿ ಕುಟ್ಟಿ ಇರ್‌ಳ್, ಮಧ್ಯರಾತ್ರಿ ಒಂದ್ ಗಂಟೆ ಆಗಿರ್ದು, ರಾಜು ಮಂಜ ಅವನ ಕೋಂಬರೆಂದ ಹೊರಗೆ ಹೊರಟತ್. ಉಟ್ಟಬಟ್ಟೆಲಿ ಬರೀಕೈಲಿ ಬಂದ್ ನೆಲ್ಲಕಿ ಮುಂದೆ ದೇವರಿಗೆ ಕೈಮುಗ್ದ್. ಗುರುಕಾರಣವನ ಮನ್ಸ್‌ಲೇ ನೆನಸಿಕಂಡ್ ಕಯ್ಯಾಲೆ ಕಟ್ರೋಳೆ ಬಾಗ್‌ಲ್‌ನ ಮೆಲ್ಲಂಗೆ ದಾಟಿತ್. ಅಷ್ಟೊತ್ತಿಗೆ ಜಗ್‌ಲಿ ಮೂಲೆಲಿ ಬೆಚ್ಚಂಗೆ ಮಲಗಿದ್ದ "ರೋಭ ನಾಯಿ" ಕುಂಯ್, ಕುಂಯ್ ತ್ತೇಳಿ ಎದ್ದ್ ಬಂದ್ ರಾಜು ಅಣ್ಣನ ಹಿಂಬಾಲಿಸಿ ಬಂದ್ ಅವನ ಹಿಮ್ಮಡಿನ ಮೂಸಿ, ನೆಕ್ಕಿ ಕಾಲಿಗೆ ಒರ್ಸಿಕಂಡ್ ಪ್ರೀತಿಂದ ಬೀಲ್ಕೊಟತ್. ರಸ್ತೆಗೆ ಇಳ್ದ್ ರಾಜುಗೆ ಎದುರುಗಡೆಂದ ಬಂದ ಸೌದೆ ಲೋಡ್ ತುಂಬಿದ ಲಾರಿನ ಕಂಡ್ ಅದಕ್ಕೆ ಅಡ್ಡ ಕೈ ತೋರ್ಸಿತ್. ಎನ್ ರಾಜಣ್ಣಾ ಮಡಿಕೇರಿಗಾ? ಅಂತ ಡ್ರೈವರ್ ಕೇಳ್ತ್, ಇಲ್ಲೆ ಜಾಕೋಬಣ್ಣಾ ನಾನ್ ಮೈಸೂರಿಗೆ ಹೊರಟಿದ್. ನಿನ್ನೊಟ್ಟಿಗೆ ಬನ್ನೆತ್ತೇಳಿ ಲಾರಿ ಕ್ಯಾಬಿನ್‌ಗೆ ಏರಿ ಹತ್ತಿ ಕುದ್ದ್ 50ರೂ. ಒಂದ್ ನೋಟನ್ ಅವನ ಕೈಗೆ ಕೊಡ್ತ್.

ಲಾರಿ ಕ್ಯಾಬಿನ್‌ನ ಒಳಗೆ ಕತ್ತಲೆಲಿ ತಣ್ಣಂಗೆ ಗಾಳಿಗೆ ಮೈಯೊಡ್ಡಿ ಕುದ್ದಿದ್ದರೂ ಕೂಡಾ ಮನ್ಸ್‌ಲಿ ಮಾತ್ರ ಬಹಳ ತಳಮಳ ಆಗ್‌ತಿತ್ತ್. ತಲೆಒಳಗೆ ಚಂಡೆ ಕೊಟ್ಟಿದಂಗೆ ಆಗ್‌ತಿತ್ತ್. ನಾನ್ ಮೈಸೂರಿಗೆ ಹೋಗಿ ಅಲ್ಲಿ ಏನ್ ಮಾಡುದು? ಹೆಚ್ಚ್ ಹಣ ಸಂಪಾದನೆ ಮಾಡುವಂತ ಕೆಲ್ಸ ಎಂತದ್ ಸಿಕ್ಕಿದೆ? ನಾನ್ ಹೊರಟದ್ ನನ್ನ ಪಪ್ಪಂಗೆ ಗೊತ್ತಾಗಿ ಹೋಗಿ ಬುಟ್ರೇ ಅವು ಲಾರಿಗಿಂತ ಮೊದ್ಲ್ ನನ್ನ ಹಿಡಿಯಕೆ ಪೋಲಿಸ್‌ನವುಕೆ ಹೇಳಿ ಬುಟ್ರೇ ನಾನ್ ಎಂತದ್ ಮಾಡ್ದು? ಆದ್ರಂದ ಇವರ್‍ಯಾರ ಕಣ್ಣಿಗೆ ಬೀಳದಂಗೆ ತಪ್ಪಿಸಿಕಂಡ್ ನಾನ್ ಮೈಸೂರು ಸೇರೋಕು. ಹಿಂಗೆ ಚಿಂತೆ ಮಾಡಿಕಂಡ್ ಕುದ್ದಿರ್‌ಕಾಕನ ಲಾರಿಬಂದ್ ಬಿಳಿಕೆರೆ ಪಾರೆಸ್ಟ್ ಚೆಕ್ಕ್ ಪೋಸ್ಟ್ ಮುಂದೆ ಬಂದ್ ನಿಂತತ್. ಡ್ರೈವರ್ ಜಾಕೋಬ್ ಲಾರಿದ್ ಪರ್ಮಿಟ್, ರಿಕಾಡ್ಸ್‌ಗಳ ತೋರ್ಸಿಕಂಡ್ ಬನ್ನೆತ್ತೇಳಿ ಕೆಳಗೆ ಇಳ್ದೊ. ಆಗ ರಾಜು ಹೇಳ್ತ್ ಜಾಕೋಬಣ್ಣಾ ನೀವು ಲಾರಿ ತಕಂಡ್ ಹೊರಡಿ ನಾನ್ ಇಲ್ಲೆ ಇಳ್ದುಬುಟ್ಟನೆ ಇಲ್ಲಿಂದ ಬೆಳಿಗ್ಗೆ ಹೊರಟನೆತ್ತೇಳಿ ಲಾರಿಂದ ಕೆಳಗೆ ಹಾರ್ತ್. ಲಾರಿ ಹೊರಟ ಮೇಲೆ ರಾಜು ಅಲ್ಲೇ ರಸ್ತೆಬದಿ ಪೆಟ್ಟಿಗೆ ಅಂಗಡಿಲಿ ಒಂದ್ ಗ್ಲಾಸ್ ಸಪ್ಪೆ ಟೀ ಕುಡ್ತ್ ಮತ್ತೆ ಹಂಗೆ ಒಂದ್ ಪ್ಯಾಕ್ ಸಿಗರೇಟ್‌ನ ತಕಂಡ್ ಒಂದಕ್ಕೆ ಬೆಂಕಿ ಹಚ್ಚಿಕಂಡ್ ಹಂಗೇ ಮುಂದಕೆ ರಸ್ತೆಲಿ ಆ ಇರುಳೊಳಗೆ ಎಂತದೆಲ್ಲಾ ಗ್ಯಾನ ಮಾಡಿಕಂಡ್ ನಡಿಯಕೆ ಶುರುಮಾಡ್ತ್.

ಎತ್ತನೋಡ್ರೂ ಬರೀ ಕತ್ತಲೆ ರಸ್ತೆಲಿ ಆಗೊಂದ್, ಈಗೊಂದು ವೆಹಿಕಲ್‌ಗ ಬೆಳಕ್‌ನ ಬುಟ್ಟುಕಂಡ್ ಅತ್ತಿಂದ ಇತ್ತ ಇತ್ತಿಂದ ಅತ್ತ ಸಾಗುತ್ತಿದ್ದೊ. ಆ ಚಳಿ ಒಳಗೂ ಈ ರಾಜುನ ತಲೆ ಬಿಸಿ ಹಂಗೆ ಇದ್ದ್‌ದರಂದ ಇಂವ ರಸ್ತೆಲಿ ನಡ್‌ಕಂಡೇ ಆಕೆರೆ ದಾಟಿ ಮುಂದೆ ಬಂದ್ ಟರ್ನ್‌ನ ದಾಟಿ ನಡೆತಿತ್ತ್. ರಸ್ತೆಯ ಎರಡ್ ಬದಿಗಳಲ್ಲಿ ಬೆಳ್ದ್ ನಿಂತ ಪಾರೆಸ್ಟ್‌ಕಾಡ್ ಮರಗ ರಯ್ ಗುಟ್ಟುವ ಹುಳ ಹುಪ್ಪಟೆಸದ್ದ್ ದೂರದೂರಂದ ಲೈಟ್ ಬೆಳಕ್‌ನ ಬೆಳಗಿಸಿಕಂಡ್ ಬರುವಂತಹ ಒಂದು ಭಯಂಕರ ಮೌನದ ಆ ಇರುಳು. ಅಷ್ಟೊತ್ತಿಗೆ ಒಂದ್ ಹೈದ ಬೆಲ್ ಹೊಡ್‌ಕಂಡ್ ಸೈಕಲ್‌ನ ಜೋರಾಗಿ ಮೆಟ್ಟಿಕಂಡ್ ಮುಂದೆ ದಾಟಿತ್. ಅಂವ ಒಂದ್ 50 ಮಾರು ದೂರ ಸನ ಹೋತಿಲ್ಲೇ ಆಗ ಅಂವ ಜೋರಾಗಿ ಕಿರ್‌ಚಿ ಕಂಡ್ ಸೈಕಲ್‌ನದಪಾರತ ಮೊಗಚಿ ಹಾಕಂಡ್ ಬಿದ್ದ ಸದ್ದ್ ಕೇಳ್ತ್. ಅವಂಗೆ ಸಹಾಯ ಮಾಡಿಕೆ ರಾಜು ಆಕಡೆಗೆ ಬೇಗ ಬೇಗ ಹೆಜ್ಜೆ ಹಾಕ್ತ್, ಅಷ್ಟರೊಳಗೆ ಅಂವನ ನಾಲ್ಕ್ ಜನ ದಾಂಡಿಗರ್‌ಗ ಸುತ್ತು ಹಾಕಿ ಹಿಡ್‌ಕಂಡ್ ಕಿರುಚಿಕೆ ಆಗದಂಗೆ ಹೊಡೀತಾ ಒಳೊ. ಅಂವನ ಜೇಬುಗೆ ಕೈಹಾಕಿ ಅದೇನೋ ಕಿತ್‌ಕಂಡೋ. ಕೈಲಿದ್ದ ವಾಚ್‌ನ, ಉಂಗುರನ ಎಳ್‌ಕಂಡ್ ಆದ ಮೇಲೆ ಹಾಂ, ಹೊರಡ್, ಇನ್ ಹಿಂದಕೆ ತಿರುಗಿ ನೋಡ್ದಂಗೆ ನಿನ್ನ ಸೈಕಲ್‌ನ ಎತ್ತಿಕೊಂಡು ಹೋಗುತ್ತೇಳಿ ಕಳ್ಸಿದೊ.

ಅಂವ ಕುಂಟಿಕಂಡ್ ಕುಂಟಿಕಂಡ್ ಸೈಕಲ್‌ನ ವಾಪಾಸ್ಸ್ ತಳ್ಳಿಕಂಡ್ ಬಾತ್, ಆಗ ರಾಜು ಅಂವನ ತಡ್ದ್ ನಿಲ್ಲಿಸಿ ಅಂವಂಗೆ ಸಮಾಧಾನ ಧೈರ್ಯ ಹೇಳ್ತ್, ಈಗ ನೆಟ್ಟಂಗೆ ಬಿಳಿಕೆರೆ ಪೋಲಿಸ್ ಸ್ಟೇಶ್‌ನ್ನಿಗೆ ಹೇಳಿ ಅಲ್ಲಿಂದ ಪೋಲಿಸ್‌ಗಳ್ನ ಕರ್‍ಕೊಂಡ್ ಬಂದ್ ಬುಡ್. ನಾನ್ ಇವುಕ್ಕೆ ಇಲ್ಲೇ ಬುದ್ದಿಕಲ್ಸಿ ಹಿಡ್ದಿಟ್ಟನೆ. ಹಾಂ, ಬೇಗ ನಡಿ ತಾ ಮೆಲ್ಲೆ ಹೇಳಿ ಕಳ್ಸಿಕೊಟ್ಟತ್. ಆಗುಂಪು ಅಲ್ಲೆ ಅಡಂಗಿ ಕುದ್ದಿದ್ದರ ತಿಳ್ಕಂಡತ್. ಅಲ್ಲೇ ಬೇಲಿ ಪಕ್ಕದ ಹುಣಸೆ ಮರದ ಒಂದ್ ಗೆಲ್ಲ್‌ನ ಎಳ್ದ್ ಮುರ್ದ್ ಒಂದು ಒಳ್ಳೆ ಮಾರುದ್ದದ ದೊಣ್ಣೆನ ಮಾಡಿಕಂಡ್ ಅವರ ಹತ್ರಕ್ಕೆ ಬಗ್ಗಿಕಂಡ್ ಅಂಡಿತ್. ಎದ್‌ರ್‌ಗಡೇಂದ ಒಂದ್ ಸ್ಕೂಟರ್ ಬಾತ್. ಅಷ್ಟೊತ್ತಿಗೆ ರಸ್ತೆನ ಆ ಕಡೆ ಇದ್ದಂವ ಓಡಿಹೋಗಿ ಮರಕ್ಕೆ ಸುತ್ತಿಮಡಗಿದ ತಂತಿನ ಸ್ವಲ್ಪ ಮೇಲೆತ್ತಿ ಎಳ್ದ್ ಹಿಡ್‌ಕಂಡತ್. ಆ ಕತ್ತಲೆಲಿ ಈ ಅಡ್ಡತಂತಿ ಆ ಸ್ಕೂಟರ್‌ನವನ ಎಳ್ದ್ ಬೀಳ್ಸಿ ಬುಟ್ಟತ್. ಅಂವ ಬಿದ್ದದೇ ತಡ ಈ ನಾಲ್ಕು ಜನ ಒಳ್ಳೆ ಜೇಡರ ಹುಳ ಹಾರಿ ಬಿದ್ದಂಗೆ ಇಂವನ ಮುತ್ತಿಕಂಡೊ. ಅಂವನ ಕಿರ್‍ಚಾಡಿಕೆ ಆಗದಂಗೆ ಒಬ್ಬ ಅವನ ಕುತಿಗೆನ ಅಮುಕಿ ಹಿಡ್‌ಕಂಡತ್. ಬಾಕಿ ಇದ್ದವು ಇಂವಂಗೆ ಹೊಟ್ಟೆಗೆ ಎದೆಗೆ ಗುದ್ದಿಕಂಡ್ ಹಿಂಸೆ ಕೊಡ್‌ತಿದ್ದೊ. ಇನ್ನೂ ಇಬ್ಬರು ಅಂವನ ಜೋಬ್‌ನ ಮೈಕೈನ ಶೋದಿಸ್‌ತಿದ್ದೊ. ಇದನ್ನ ನೋಡ್ದ ರಾಜುಗೆ ಸಿಟ್ಟ್ ನೆತ್ತಿಗೆ ಏರ್ತ್, ಒಂದೇ ನೆಗತಕ್ಕೆ ಅವರ ಮುಂದೆ ನಿಂತ್ ಕಂಡತ್, ಒಬ್ಬೊಬ್ಬ ತಲೆಗೆ ಎಡಕ್ಕೆ ಬಲಕ್ಕೆ ದೊಣ್ಣೆನ ಬೀಸಿತ್ ನಾಲ್ಕು ಜನರ ತಲೆಗೂ ಹಸಿ ದೊಣ್ಣೆದ್ ಅಡ್ಡ ಏಟ್ ಪಟ ಪಟತ ಬಿದ್ದಾಕನ ಅವು ಕಣ್ಣ್‌ಬುಟ್ಟ್ ನೋಡಿಕೆ ತಾಕತ್ ಆಗದೆ ಅಯ್ಯೋ ಅಪ್ಪಾತಾ ಕಿರುಚಾಡಿ ಕಂಡೋ ಈ ಸಡನ್ ಎಟ್ಯಾಕ್‌ನ ನಿರೀಕ್ಷಸದೇ ಇದ್ದವುಕೆ ಇದ್ ನೈಟ್ ಡ್ಯೂಟಿ ಮಾಡುವ ಪೋಲೀಸ್ ನವೇ ಇರೋಕುತ್ತೇಳಿ ಗ್ಯಾನ ಮಾಡ್ದೋ. ಹಸಿದೊಣ್ಣೆ



ಏಟ್ ಈಗ ಒಬ್ಬೊಬ್ಬರ ಕಾಲ್‌ಗಂಟಿಗೆ ಬೀಳುತಾ ಉಟ್ಟು ಒಬ್ಬೊಬ್ಬ ಲಾಗ ಹಾಕಂಡ್ ಹಾರಿಹಾರಿ ಬಿದ್ದ್‌ಎದ್ದ್ ತಿರುಗಿ ಹೊಡೆಯಕೆ ಪ್ರಯತ್ನ ಮಾಡ್ದೊ. ಆಗ ಆ ಸ್ಕೂಟರ್‌ಲಿ ಬಂದ ಜನ ಕೂಡಾ ರಾಜುನ ಒಟ್ಟಿಗೆ ಸೇರಿಕಂಡ್ ಅವರ ಹೊಟ್ಟೆಗೆ ತಿಕಕ್ಕೆ ಹಾರಿ ಹಾರಿ ಒದಿಯಕೆ ಶುರುಮಾಡ್ದೊ, ಒಬ್ಬ ಹೇಂಗೊ ಕಿರುಚಿಕಂಡ್ ಹಾರಿ ಬಿದ್ದ್ ಕತ್ತಲೆ ಒಳಗೆ ಮಾಯ ಆಗಿ ಬುಡ್ತ್. ಬಾಕಿ ಮೂರು ಜನ ಮಾತ್ರ ಕಾಲ್ ಎತ್ತಿ ಹಾಕಿಕೆ ಬೊತ್ತದೆ ಕಿರ್‌ಚಾಡಿಕಂಡ್ ಅಲ್ಲೇ ನೆಲದ ಮೇಲೆ ಹೊರಳಾಡುತಿದ್ದೊ, ಇಷ್ಟೆಲ್ಲಾ ಕೆಲ್ಸ 2ನಿಮಿಷಲಿ ಮುಕ್ತ್. ಅಷ್ಟೊತ್ತಿಗೆ ಅಲ್ಲಿಗೆ ಗರುಡ ಪೋಲಿಸ್ ಜೀಪ್ ಬಂದ್ ಇವರ ಹತ್ರ ಬ್ರೇಕ್ ಹೊಡ್ದ್ ನಿಂತತ್. 6ಜನ ಪೋಲಿಸ್‌ಗ ರೈಫಲ್‌ನ ಮುಂದೆ ಮಾಡಿಕಂಡ್ ಕೆಳಗೆ ಹಾರಿ ಓಡಿಬಂದ್ ಈ ಗುಂಪ್‌ನ ಸುತ್ತ ನಿಂತ್ ಬುಟ್ಟೊ. ಪಿಸ್ತೂಲ್ ಹಿಡ್‌ಕಂಡ್ ಕೆಳಗೆ ಇಳ್ದ ಪೋಲಿಸ್ ಇನ್ಸ್‌ಸ್ಪೆಕ್ಟರ್ ದೊಣ್ಣೆ ಹಿಡಕಂಡ್ ನಿಂತಿದ್ದ Mr. ರಾಜುಗೆ "ಹ್ಯಾಂಡ್ಸಪ್" ತ್ತಾ ಹೇಳಿಕಂಡ್ ಗುರಿಹಿಡ್ತ್. ಮಿಕ್ಕಿದ ಮೂರು ಜನರ ಕೈ ಹಿಡ್ದ್ ಹಿಂದೆ ತಿರುಗಿಸಿ ಹಿಡ್ದ್ ಅವರ ಕೈಗೆ ಕೋಳ ಹಾಕಿ ಹಿಡ್‌ಕಂಡೋ. ಆಗ ರಾಜು ಕೈನ ಮೈಲಕ್ಕೆ ಎತ್ತಿ ಕಂಡೇ ಹೇಳ್ತ್. ಸಾರ್ ನಾನೇ ಇವರಿಗೆಲ್ಲಾ ಹೊಡ್ದ್ ಇಲ್ಲಿ ಉರುಳಿಸಿದ್ದ್. ಈ ಸ್ಕೂಟರ್‌ನವನ ಈ ಕಳ್ಳಂಗ ತಂತಿ ಅಡ್ಡ ಹಾಕಿ ಬೀಳ್ಸಿ ಹೀಡ್ದಿದ್ದೊ. ನಾನ್ ಇಂವ ಬಚಾವ್ ಮಾಡಿಕೆ ಬಂದಂವ, ನಾನ್ ಇವರಂಗೆ ಕಳ್ಳ ಅಲ್ಲಾ ಸಾರ್ ತಾ ಹೇಳ್ತ್ " ಹುಶ್" ಸ್ವರ ಎತ್ ಬ್ಯಾಡ ಮುಚ್ಚು ಬಾಯಿ ನಂಗೆಲ್ಲಾ ಗೊತ್ತುತ್ತೇಳಿ ಗದರಿಸಿತ್. ಆಗ ಸ್ಕೂಟರ್‌ಂದ ಬಿದ್ದ ಮನುಷ್ಯ ಹತ್ರಬಂದ್ ಸಾರ್ ಈ ಜನನ ಬುಟ್ಟುಬುಡಿ. ನನ್ನ ಈ ಕಳ್ಳರ್ ಹಿಡ್ದ್ ಹೊಡಿಯಕಾಕನ ಇವು ಆಕೂಡ್ಲೆ ಎಲ್ಲಿಂದೊ ಬಂದ್ ಇವುಕೆಲ್ಲಾ ಹೊಡ್ದ್ ನನ್ನ ಪ್ರಾಣನ ಉಳ್ಸಿದೊ, ಇವರ ತಪ್ಪಿತಸ್ತರಲ್ಲತ್ತೇಳ್ತ್. ಆದ್ರೇ ಆ ಇನ್‌ಸ್ಪೆಕ್ಟರ್‌ನ ಕಿವಿಮೇಲೆ ಬೀಳುತನೇ ಇಲ್ಲೇ. ಅವನ ಪಾಡಿಗೆ ಅವು ಕಿರುಚುದೊಂದೇ ಕೆಲ್ಸ. ನನಗೆ ಗೊತ್ತುರೀ ಬುಡೀ ಇದೆಲ್ಲಾ ಇವರ ಬರೀನಾಟಕಗಳು, ನಮಗೆ ಚಳ್ಳೆ ತಿನ್ಸಿ ಎಗರಿಲಿಕ್ಕಿರುವ ಪ್ಲಾನ್ ರೀ ಇದೂ. ದಬ್‌ರ್‍ರೀ ಇಂವನ ಒಳಿಕ್ಕೆ. ಕದೀಮಾ ನಾನು ಎದುರಗಡೆ ನಿಂತಿದ್ರೂರ್‍ ಇವನು ಹಿಡ್ದಿದ್ದ ದೊಣ್ಣೆನ ಬಿಟ್ಟಿಲ್ಲಾ ನೋಡುತ್ತೇಳಿ ಒಂದು ರಾಜುನ ಮುಖಕೆ ಗುದ್ದಿದೊ. ಅಷ್ಟೊತಿಗೆ ಆ ಪೋಲೀಸ್‌ನವು ಇಂವನ ಸೇರ್‍ಸಿ ಹಿಡ್‌ಕಂಡೊ. ಇದರ ನೋಡ್ದ ಸ್ಕೂಟರ್‌ನವಂಗೂ ಭಯ ಶುರು ಆತ್. ಈ ಹುಚ್ಚ್ ಪೋಲೀಸರ ಸಹವಾಸ ಬಹಳ ಕಷ್ಟತ ಗ್ಯಾನ ಮಾಡಿಕಂಡ್ ಅಲ್ಲಿ ದೂರಲಿ ಬಿದ್ದಿದ್ದ ಸ್ಕೂಟರ್‌ನ ಎತ್ತಿನಿಲ್ಸಿ ಅದರ ಸ್ಟಾರ್ಟ್‌ಮಾಡಿಕಂಡ್ ಮೆತ್ತಂಗೆ ಅಲ್ಲಿಂದ ಜಾಗ ಖಾಲಿ ಮಾಡ್ತ್.

ಗರುಡ ಪೋಲೀಸ್‌ಗ ಈಗ ಖುಷೀಲಿ ಇಂದ್ ನಾವು ರೋಡ್ ರಾಬರ್ಸ್ ದೊಡ್ಡ ಗ್ಯಾಂಗ್‌ನ ಕ್ಯಾಪ್ಚರ್ ಮಾಡಿಬುಟ್ಟೋ ತಾ ಹೇಳಿಕಂಡ್ ಎದೆ ಉಬ್ಬಿಸಿ ಕಂಡ್ ಜೀಪ್‌ನ ಮೈಸೂರು ಕಡೆಗೆ ತಿರ್‍ಗಿಸಿ ಹೊರಟೊ. ಹಂಗೇ ರಸ್ತೆಲಿ ಬಾಕಾಕನ ರಾಜು ಪುನಃ ಇನ್ನೊಂದು ಸರ್ತಿ ಹೇಳ್ತ್. ಸರ್ ನಾನ್ ಈ ರಾಬರ್ಸ್‌ಗ್ಯಾಂಗ್‌ನ ಮೇಲೆ ಒಬ್ಬನೇ ಎಟ್ಯಾಕ್‌ಮಾಡಿ ಇವುಕೆ ನಾನೇ ಹೊಡ್ದ್ ಆ ಸ್ಕೂಟರ್‌ನವನ ಬಚಾವ್ ಮಾಡ್ದೆ. ನೀವು ನನ್ನ ಮಿಸ್ಟೇಕ್ ತಿಳ್ಕಂಡೊಳರಿತಾ ಹೇಳ್ತ್. ಅಷ್ಟೊತ್ತಿಗೆ ಜೊತೆಲಿ ಇದ್ದ ಕಳ್ಳರ್‌ಗ ಇವನೂ ನಮ್ಮೊಟ್ಟಿಗೆ ಜೊತೇಲಿ ಬಿದ್ದಿರಲಿ ಜೈಲ್‌ಒಳಗೆ ಇಂವನ ತಿಥಿಮಾಡಕ್ ತಾ ಪ್ಲಾನ್ ಮಾಡಿ ಇಲ್ಲಾಸ್ವಾಮಿ ಇಂವನೇ ನಮ್ಮ ಗ್ಯಾಂಗ್‌ನ ಲೀಡರ್ ಇಂವನ ಮಾತನ ಕಟ್ಟಿಕಂಡ್ ಇಂದ್ ನಮಿಗೆ ಈ ಗತಿ....ತಾ ಏನೇನೋ ಹೇಳಿಕೆ ಹೊರಟೊ.

ಅಷ್ಟೊತಿಗೆ ಜೊತೆಲಿದ್ದ ಪೋಲಿಸ್‌ಗೆಲ್ಲಾ ಒಟ್ಟಿಗೆ ಕಿರಚಿದ್ದೊ, ಸಾಕೊ ನಿಲ್ಸುರೋ ನಿಮ್ಮ ಬುರಡೆಗಳನ್ನ ಈಗೆಲ್ಲಾ ನೀವು ಒಳ್ಳೆ ಸಾಚಾಗಳಂಗೇ ಮಾತಾಡೊದು, ನಿಮ್ಮ ಬಾಯಿಂದ ನಿಜ ಹೆಂಗೆ ಬುಡ್ಸೋಕು ತೇಳ್ದರ ನಮಿಗೆ ಪಾಠ ಹೇಳ್ದು ಬ್ಯಾಡತ್ತೇಳಿ ಪಠಾರನೆ ಹೇಳ್ದಂವನ ದವುಡೆಗೆ ಬಾರ್‍ಸಿದೊ. ಆಮೇಲೆ ಎಲ್ಲವೂ ಕೇಕೆ ಹಾಕಂಡ್ ನೆಗೆ ಆಡಿ ಕಂಡ್ ಇವರಿವರ ಗ್ರೇಡ್ ಬಗ್ಗೆ, ಬಡ್ತಿ ಬಗ್ಗೆ ಮಾತಾಡಿಕಂಡ್ ಖುಷಿ ಪಟ್ಟ್‌ಕಂಡೋ. ಅಷ್ಟೊತ್ತಿಗೆ ಜೀಪ್‌ಬಂದ್ ದೇವರಾಜ್ ಪೋಲಿಸ್ ಸ್ಟೇಶನ್ ಮುಂದೆ ಬಂದ್ ನಿಂತತ್. ಇಬ್ಬಿಬ್ಬರ್ ಪೋಲೀಸ್‌ಗ ಈ ಕಳ್ಳರ ರಟ್ಟೆಹಿಡ್ಕಂಡ್ ದರದರತಾ ಎಳ್ಕಂಡ್ ಸ್ಟೇಶನ್ ಮೆಟ್ಲ್‌ನ ಹತ್ತಿದೊ: ಒಬ್ಬೊಬ್ಬರನ ಹಿಂದಕ್ಕೆ ತಿರ್‍ಗಸಿ ತಿಕದ ಮ್ಯಾಲೆ ಬೂಟ್‌ಲಿ ಒದಿಯಾಕಾಕನ ಒಬ್ಬೊರಾಗಿ ಬಾಗಲ್ ತೆಗೆದಿದ್ದ ಲಾಕಪ್ ಒಳಗೆ ಮುಗ್ಗರಿಸಿಕಂಡ್ ಹೋಗಿ ಬೀಳ್ತಿದ್ದೊ. ನಮ್ಮ ರಾಜು ಹೈದಂಗೆ ಕೂಡಾ ಈ ಮರ್‍ಯಾದಿಲಿ ಸ್ವಲ್ಪನೂ ಕಮ್ಮಿ ಆತಿಲ್ಲೆ.

ಬೆಳಗಿನ ಜಾವ ನಾಲ್ಕು ಗಂಟೆ ಆಗಿರ್ದ್ರು ಎಲ್ಲೋ ರೌಂಡ್ಸ್‌ಗೆ ಹೋಗಿದ್ದ ಇನ್‌ಸ್ಪೆಕ್ಟರ್ ಸಿದ್ದಪ್ಪ ಕೂಡಾ ಸ್ಟೇಷನ್‌ಗೆ ಬಂದೊ. ಇಲ್ಲಿ ಲಾಕಪ್ ಒಳಗೆ ತಂದ್ ತುಂಬಿದ ಈ ನಾಲ್ಕು ಜನ ಗೂಂಡಾಗಳ ನೋಡಿ ಖುಷಿಪಟ್ಟ್ ಇನ್‌ಸ್ಪೆಕ್ಟರ್ ನಾಚಪ್ಪನ ಹತ್ರ ವಿಚಾರಿಸಿದೊ. ಅಷ್ಟೊತಿಗೆ ಒಬ್ಬ P.C. ಹೋಗಿ ಪ್ಲಾಸ್ಕ್‌ಲಿ 8ಗ್ಲಾಸ್ ಕಾಫಿನ ಹೊತ್‌ಕಂಡ್ ಬಾತ್, ಎಲ್ಲಾ ಇನ್‌ಸ್ಪೆಕ್ಟರ್‌ಗ, P.C.ಗ ಎಲ್ಲಾ ನೆಗೆ ಆಡಿಕಂಡ್ ಇಂದ್ ಭಾರೀ ದೊಡ್ಡ ಕೇಸ್‌ನ ಬಿಳಿಕೆರೆಂದ ಹಿಡ್ದ್‌ತಂದ್ ಬುಟ್ಟೋಳೊ ತ್ತೇಳಿ ಖುಷಿ ಪಟ್ಟೊ, ಇನ್ನ್ ಗರುಡ ಪೋಲಿಸ್ ಸ್ಟಾಫ್, ಬಹಳ ಕಷ್ಟಪಟ್ಟ್ ಬೆನ್ನಟ್ಟಿ ಕಂಡ್ ಓಡಾಡಿ ಈ ರಸ್ತೆ ರಾಬರ್ಸ್‌ಗಳನ್ನ ಹಣ್ಣ್‌ಗಾಯಿ ನೀರ್‌ಗಾಯಿ ಮಾಡಿ ಕ್ಯಾಪ್ಚರ್ ಮಾಡ್ದ್‌ತ ಬೆಳಿಗ್ಗೆ ಬರುವ ದೊಡ್ಡ ಆಫೀಶರ್ಸ್‌ಗಳಿಗೆ ತೋರ್ರ್ಸೂಕಲ್ಲಾ? ಅದ್‌ಕ್ಕೊಸ್ಕರ ಒಂದ್ ರೌಂಡ್ ಒಳ್ಳೆಲಾಯಕ್‌ಲಿ ಇವುಕೆಲ್ಲಾ ಚಾರ್ಜ್‌ಮಾಡಿ ಬುಡೋಣ ತ್ತೇಳಿ ತೀರ್ಮಾನ ಮಾಡ್ದೊ ಹಂಗೇ ಆ ದಡಿಯ ಇನ್‌ಸ್ಪೆಕ್ಟರ್ ಸಿದ್ದಪ್ಪ ಆರು ಅಡಿ ಉದ್ದದ ಬೆತ್ತದ ದೊಣ್ಣೆನ ಒಬ್ಬ P.C.ಗೆ ಹೇಳಿ ತರ್‍ಸಿಕಂಡೊ.

ಮೊದ್ಲ್ ಈ ಗುಂಪ್‌ಲಿ ಒಳ್ಳೆ ಕಟ್‌ಮಸ್ತಾಗಿ ಕಾಣ್‌ತಿದ್ದ ರಾಜುನ ಹೊರಗೆ ಎಳ್ದ್‌ತಂದೊ ಏನೋ ಬೋಳೀಮಗನೆ? ಬೊಗೊಳೋ ಎಲ್ಲೆಲ್ಲಾ ನಿನ್ನ ದರೋಡೆ ಕೆಲ್ಸನ ಮಾಡಿದ್ದೆ ಬೊಗಳೋ ಬೊಗೊಳೋತ್ತೇಳಿ ಅಬ್ಬರಿಸಿಕಂಡ್ ಕಾಲ್‌ಗಂಟ್‌ಗಳಿಗೆ, ಬೆನ್ನ್



ಮೇಲೆ ತಲೆಗೆ ಕೈಗಂಟ್‌ಗಳಿಗೆ ಹಿಂಗೆ ಒಂದೇ ಸಮನೆ ಬೊಡ್ಡ್ ಬುಟ್ರೊ, ಇಂವ ಕೈಮುಕ್ಕಂಡ್ ಏನೇನ್ ಹೇಳ್ರೂ ಆ ಪೋಲಿಸ್ ಜನರ ಕಿವಿಗೆ ಕೇಳ್ಸುವಂಗೆ ಇಲ್ಲೆ. ಸರಿ ಇಂವಂಗೆ ಫುಲ್ ಸುಸ್ತ್ ಆದ ಮೇಲೆ ಎಳ್ಕಂಡ್ ಹೋಗಿ ಪುನಃ ಲಾಕಪ್ ಒಳಗೆ ಮಲಗಿಸಿದೊ. ಹಿಂಗೆ ಬಾಕಿ ಇದ್ದ ಮೂರು ಜನಕ್ಕೂ ಬಾಳೆಕಾಯಿಯಷ್ಟ್ ದಪ್ಪದಪ್ಪದ ಬರೆ ಬರುವಹಂಗೆ ದೊಣ್ಣೆಲಿ ಬೊಡ್ಡ್ ಬೊಡ್ಡ್ ತಮ್ಮ ಡ್ಯೂಟಿನ ಮುಗ್ಸಿದೊ, ಏನ್ ಎಂತತ್ತೇಳುವ ವಿಚಾರನ ಇವು ಕೇಳ್‌ತಿಲ್ಲೆ, ಇವು ಮಧ್ಯರಾತ್ರಿಲಿ ಹೋಗಿ ಬರುವ ಜನರ ಅಡ್ಡಹಾಕಿ ಸುಲಿಗೆ ಮಾಡುವಂತಹ ದರೋಡೆ ಕೋರರುತ್ತೇಳ್ವ ರೋಷ ಒಂದೇ ಈ ಪೋಲಿಸ್‌ನವುಕೆ ಇದ್ದದ್.

ಇನ್ನ್ ಇವರ ಬಾಯಿ ಬುಡ್ಸಿಕೆ ಬೆಳಕ್ ಹರ್ದಮ್ಯಾಲೆ ಬಂದವೆಲ್ಲಾ ಬೇರೆ ಪಾಳಿ ಪೋಲಿಸ್‌ಗ ಅಲ್ಲಿವರ್ಗೂ ಇವು ಹಿಂಗೇ ಬಿದ್ದಿರಲಿ ತ್ತೇಳಿ ಲಾಕಪ್‌ದ್ ಬೀಗನ ಹೊರಗಿಂದ ಹಾಕಿದೊ.

ರಾಜು ಮಂಜ ಮನೆಂದ ಮಧ್ಯರಾತ್ರಿ ಹೊರಟ್ ಇನ್ನೂ ಬೆಳಕ್ ಹರ್ದತಲೆ ಅಷ್ಟರೊಳಗೇ ಇಂವಂಗೆ ಶನಿದೇವರ ದೆಶೆ ಬಂದ್ ಒದಗಿ ಬುಟ್ಟಿತ್. ಇಂವನ ಮೈತುಂಬಾ ಬಿದ್ದ ಏಟಿಗೆ ಬಂದ ಬರೆಗೆಲ್ಲಾ ಕಪ್ಪುಗಟ್ಟಿ ಹೋಗಿತ್. ಮೂಳೆಗೆಲ್ಲಾ ಮುರ್ದ್ ಹೋದಂಗೆ ಬೇನೆ ಆಗ್‌ತಿತ್ತ್, ಮೈಯಲ್ಲಿದ್ದ ಶಕ್ತಿ ಎಲ್ಲಾ ಕುಂದಿ ಹೋಗಿತ್. ಮೈಯಲ್ಲಿ ಬಟ್ಟೆ ಇಲ್ಲದೆ ಚಳಿಗೆ ಶರೀರ ನಡ್‌ಗಿಕೆ ಶುರು ಆತ್, ದೊಂಡೆ ಒಣಗಿ ಹೋಗಿ ನೀರ್ ನೀರ್‌ತಾ ಕೇಳ್‌ತಿತ್ತ್. ತಲೆ ಜುಂ ತ್ತೇಳಿ ತಿರುಗಿಕೆ ಶುರು ಆತ್. "ಇಲಿ ಓಡಿಬಂದ್ ಬೋನ್ ಒಳಗೆ ಬಿದ್ದ್ ಹೋದಂಗೆ ಆತಲ್ಲಾ ನನ್ನಕತೆ" ದಾರಿ ಹೋಕರಿಗೆ ಸಹಾಯ ಮಾಡಿಕೆ ಹೋಗಿ ಈ ಕೆಟ್ಟ ಪೋಲೀಸರ ಕೈಗೆ ಸಿಕ್ಕಿ ಹಾಕಿಕೊಂಡ್ ಬುಟ್ಟೆಲಾ? ನಾನ್ ಕಳ್ಳನೇ ತ್ತೇಳಿ ಸಾಬೀತ್ ಮಾಡಿ ನನ್ನ ಬಳ್ಳಾರಿ ಜೈಲಿಗೆ ಹಾಕಿಬುಟ್ಟರೆ ಏನ್ ಗತಿ ದೇವರೇ? ನನ್ನ ಪ್ರೀತಿನ ತಂಗೆ ಮದ್ವೆನ ಹೆಂಗೆ ನಡ್ಸುದು ಗುರುವೆ? ನನ್ನ ಮನೆ ಗುರುಕಾರಣವಂಗೂ ನನ್ನ ಸ್ಥಿತಿ ಅರ್ಥ ಆತ್‌ಲ್ಲೆ?ಗುರುವೇ ತ್ತೇಳಿ ಹುಚ್ಚ್ ಹಿಡ್ದವರಂಗೆ ಕಣ್ಣೀರ್ ಹಾಕಂಡ್ ದೇವರನ ಬೇಡಿಕಂಡೇ ಇತ್ ಇಂವಂಗೆ ಎಷ್ಟ್ ಹೊತ್ತಿಗೆ ಪ್ರಜ್ಞೆ ಹೋಗುಟ್ಟುತಾ ಅಲ್ಲಿ ಯಾರಿಗೂ ಗೊತ್ತಾತ್‌ಲ್ಲೆ. ಇಂವ ಹಂಗೇ ಕಾಲ್ ನೀಂಡಿ ಬಿದ್ದ್ ಹೋಗಿತ್.

**(ಮುಂದ್‌ವರ್ದದ್)**

**ಶಂಕರನ ಮುತ್ತಪ್ಪ ಬಸಪ್ಪ**

---

## ತುಲಾ ಸಂಕ್ರಮಣ

ಬ್ರಹ್ಮಗಿರಿಯ ತಪ್ಪಲಿಂದ ಇಳಿದು ಬಾ
ಇಳಿದು ಬಾ ಕಾವೇರಿ ಹರಿದು ಬಾ
ಜುಳು ಜುಳುವಾಗಿ ಹರಿದು ಬಾ
ಇಳಿದು ಬಾ ಕಾವೇರಿ ಇಳಿದು ಬಾ
ತಲಕಾವೇರಿಯಲಿ ನೆಲೆಯಾಗಿ
ಭಕ್ತಾದಿಗಳು ನಮಿಸುವರು ತಲೆಬಾಗಿ
ಕನ್ನಿಕೆ ಹರಿಯುವಳು ಭಾಗಮಂಡಲದಲ್ಲಿ
ಸುಜ್ಯೋತಿ ಜೊತೆಗೂಡುವಳು ತ್ರಿವೇಣಿ ಸಂಗಮದಲ್ಲಿ
ವರುಷಕ್ಕೊಮ್ಮೆ ಬರುವಳು ತುಲಾ ಸಂಕ್ರಮಣದಲ್ಲಿ
ಹಲವಾರು ಭಕ್ತರು ನಿನ್ನ ಸನ್ನಿಧಿಯಲ್ಲಿ
ಮಂತ್ರವ ಘೋಷಿಸುತ್ತ ಪೂಜೆಯಲ್ಲಿ
ಕುಂಕುಮ ಹೂವು ಅರ್ಚನೆಯಲ್ಲಿ
ಚಿಮ್ಮುತ ಬಂದಳು ಕಾವೇರಿ
ತೀರ್ಥ ರೂಪದಲ್ಲಿ ಜಗತ್ತಿಗೆ ತೋರಿ
ನಿನ್ನ ಮಹಿಮೆಯ ನೋಟದಲ್ಲಿ
ಎಲ್ಲಾ ಭಕ್ತರ ಕಾತುರದಲ್ಲಿ
ಪಾಪವ ಕಳೆವರು ಭಕ್ತರು ಮಿಂದು
ಗೋವಿಂದ ಗೋವಿಂದ ಎನುತ ಮುಂದು
ಹರಿದು ಬಾ ಕಾವೇರಿ ಇಳಿದು ಬಾ
ರೈತ ಜನರ ಮನವನು ತಣಿಸು ಬಾ
ಹಚ್ಚ ಹಸಿರಿನ ನಡುವೆ ನಿಂತಳು ಕಾವೇರಿ
ಜೈಕಾರ ಹಾಕಿದವು ದುಂಬಿಗಳು ಹಾರಿ
ಕಾವೇರಿ ನಿಂತಿಹಳು ನಗು ನಗುತ್ತಾ
ಕೈ ಬೀಸಿ ಕರೆವಳು ರೈತ ಜನರ ಕೂಗುತ್ತಾ
ಕಾವೇರಿ ಕೊಡುವಳು ವರುಷಕ್ಕೊಮ್ಮೆ ದರುಶನವನ್ನು
ತಪ್ಪದೆ ಕೊಡುವೆವು ನಮ್ಮ ಕಾಣಿಕೆಯನ್ನು
ಬರುವರು ಜನರು ತುಲಾ ಸಂಕ್ರಮಣದಂದು
ಪುಣ್ಯವ ಪಡೆವರು ಸನ್ನಿಧಿಯಲಿ ಅಂದು
ಕಾವೇರಿ ಕ್ಷೇತ್ರವು ನೋಡಲು ಬಲು ಸುಂದರ
ನೆರೆ ಹೊರೆ ರಾಜ್ಯಕ್ಕೂ ಬೇಕಾದಳು ಕಾವೇರಿ
ಬ್ರಹ್ಮಗಿರಿಯ ತಪ್ಪಲಿಂದ ಇಳಿದು ಬಾ
ಇಳಿದು ಬಾ ಕಾವೇರಿ ಹರಿದು ಬಾ

**ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ**

---

## ಲೊಟ್ಟೆ

ಹಾಕಿತ್ ಅಂವ ಖಾದಿ ಬಟ್ಟೆ,
ಹೊಡ್‌ತ್ ಜೆನಂಗಳ ಮುಂದೆ ಲೊಟ್ಟೆ
ಸರಕಾರಂದ ಸಿಕ್ಕಿತವಂಗೆ ಪುಕ್ಸಟೆ
ರಾಜ್ಯದ ಸುಖದ ಮಂತ್ರಿ ಪಟ್ಟೆ,

ಕೊಳಂಬೆ ಮಮತ ಲಕ್ಷ್ಮಣ, ಕೊಡಗು.

---

ಕೊಡಗು ಸಂಗಾತಿಯ ಪ್ರಯತ್ನ ಶ್ಲಾಘನೀಯವಾದದ್ದು. ಆದರೆ ನಿಮ್ಮ ಕೈಯಿಂದ ಹಣ ಕಳೆದುಕೊಂಡು ಈ ಕೆಲಸ ಮಾಡುವುದು ಬೇಡ. ಈಗ ಎಲ್ಲರೂ ಹೊಗಳಬಹುದು. ಆದರೆ ತೊಂದರೆಗೆ ಸಿಕ್ಕಿದಾಗ ಯಾರು ರಕ್ಷಣೆಗೆ ಧಾವಿಸಲಾರರು.

ಪ್ರೊ. ಪಿ. ಎ. ಪೊಣ್ಣಪ್ಪ, ಬೆಂಗಳೂರು



## ಅಪರಿಚಿತ ನೆಂಟರ್

ಆ ಹೆಂಗಸ್ ಮನೇಲಿ ಒಂಟಿಯಾಗಿತ್ತ್. ಈ ವಿಷಯ ಮೊದಲೇ ಗೊತ್ತಿದ್ದರೂ, ಆ ಮೂರ್ ಜನ ಗಂಡಸ್‌ರ್ ಸೀದಾ ಅವಳ ಮನೆಗೆ ಹೋಗಿ ಬಾಗಿಲ್ ಚಿಲಕ ಬಡ್ಡೊ. ಆ ಮೂವರ ಮನಸ್ಸಿನೊಳಗಿನ ಮರ್ಮವ ಅರಿಯದ ಆ ಹೆಂಗಸ್ ಸೀದಾ ಬಂದ್ ಬಾಗಿಲ್ ತೆಗ್ತ್. ಹೊರಗೆ ನಿತ್ತಿದ್ದ ಅಪರಿಚಿತರ ಮುಖಗಳ್ನ ಕಂಡ್ ಅವು ಗಾಬರಿ ಆಗದೆ "ನೀವ್ಯಾರ್‌ತ ಗೊತ್ತಾತ್‌ಲೆ ಅಲ ಅಣ್ಣಾ..., ದೂರಂದ ಬಂದೊಳರಿ ಕಂಡದೆ, ಕಾಲ್ ತೊಳಿಯಕೆ ನೀರ್ ತನ್ನೆ.. ಸ್ವಲ್ಪ ದಣಿವಾರಿಸಿಕಣಿ, ತ್ತೇಳಿ ಹೇಳ್ತ್. ಆಗ ಅವರ್‌ಲ್ಲಿ ಒಬ್ಬ

" ನಿನ್ನ ಗಂಡ ಮನೇಲುಟ್ಟಾ?" ತೇಳಿ ಪ್ರಶ್ನೆ ಕೇಳ್‌ತ್.

"ಇಲ್ಲೆ ಅಣ್ಣಾ ಅವು ತೋಟಕ್ಕೆ ಹೋಗೋಳೊ, ಇನ್ನೇನ್ ಬರುವ ಹೊತ್ತಾತ್.. ಬನ್ನಿ ಒಳಗೆ ಕುದ್ದ್‌ಕಣಿ"ತೇಳಿ ಹೆಂಗಸ್ ಹೇಳ್ತ್.

"..ಇಲ್ಲೆ ನಿನ್ನ ಗಂಡ ಬರ್‌ಲಿ. ನಾವ್ ಅಲ್ಲೀ ಮುಟ್ಟ ಇಲ್ಲೇ ಜಗ್‌ಲಿಲೇ ಕುದ್ದಿದ್ದವೆ"ತೇಳಿ ಅವು ಹೇಳ್ದೊ.

'ಸರಿ'ತೇಳಿ ಆ ಹೆಂಗಸ್ ಮನೆಯೊಳಗೆ ಹೋತ್. ಒಂದರ್ಧ ಗಂಟೆಕಳ್ದ ಮ್ಯಾಲೆ ಅವಳ ಗಂಡ ಹಿತ್ತಲ ಬಾಗ್ಲಿಂದ ಮನೆಗೆ ಬಾಕನ, ಅಂವನ ಹೆಣ್ಣ್ ಆಮೂರು ಜನ ಗಂಡಸರ ಬಗ್ಗೆ ಅವಂಗೆ ಹೇಳ್ತ್. ಅದ್ನೆಲ್ಲಾ ಕೇಳ್‌ದ ಗಂಡ ಸರಿ. ಅವರ್‍ನ ಬೇಗ ಹೋಗಿ ಒಳಗೆ ಕರ್ಕಂಡ್ ಬಂದ್ ಬುಡ್'ತೇಳಿ ಹೇಳ್ತ್. ಅಂವನ ಹೆಣ್ಣ್ ಕೂಡ್ಲೆ ಹೋಗಿ ಆ ಮೂವರ್‍ನ ಒಳಗೆ ಕರಿಯಕ್ಕಾಕನ ಅವು"ನಾವು ಮೂವರೂ ಒಟ್ಟಿಗೇ ಯಾರ ಮನೇಗೂ ಹೋದುಲೆ' ತೇಳಿ ಹೇಳ್ದೊ.

"ಅದ್ಯಾಕೆ ಅಣ್ಣಾ, ಹಂಗೆ?'ತ ಹೆಂಗಸ್ ಆಶ್ಚರ್ಯಲಿ ಕೇಳ್ತ್.

ಆಗ ಮೂವರ ಪೈಕಿ ಒಬ್ಬ ಹೇಳ್ತ್ "ನೋಡಿ ಅಕ್ಕ,.. ಇಂವನ ಹೆಸ್ರ್'ಸಂಪತ್", ಮತ್ತೆ ಇನ್ನೊಬ್ಬನ ಕಡೆ ಬೆರಳ್ ಮಾಡಿ "ಇಂವನ ಹೆಸ್ರ್ 'ಜಯ' ಮತ್ತೆ ನನ್ನ ಹೆಸ್ರ್ 'ಪ್ರೇಮ್'ತೇಳಿ. ಈಗ ನಿನ್ನ ಗಂಡನ ಹತ್ರ ಹೋಗಿ ಸರಿಯಾಗಿ ಕೇಳಿಕಂಡ್ ಬನ್ನಿ. ನಮ್ಮ ಮೂವರ್‌ಲಿ ಯಾರ್ ಒಳಗೆ ಬಾಕುತೇಳಿ?"ತ ಅಂವ ಹೇಳ್ತ್.

ಸ್ವಲ್ಪ ಕಸಿವಿಸಿಗೊಂಡರೂ ಆ ಹೆಂಗಸ್ ಎದ್‌ರ್ ಮಾತಾಡದೆ, ಸೀದಾ ಒಳಗೆ ಹೋಗಿ ನಡ್ದದನ್ನ ಗಂಡಂಗೆ ವಿವರಿಸಿತ್. ಅವಳ ಗಂಡಂಗೆ ಎಲ್ಲಾ ಕೇಳಿ ಬಹಳ ಕುಶಿಯಾತ್. ಆ ಮೂರ್ ಜನ ಅಪರಿಚಿತರ ನಿಘೂಢತೆ ಅಂವಂಗೆ ಅರ್ಥ ಆತ್. ಅಂವ ಕೂಡ್ಲೆ ಹೇಳ್ತ್ " ಅವರ ಇಷ್ಟದಂಗೆ ಆಗಲಿ.. ನೀನ್ ಹೋಗಿ ಸಂಪತ್‌ನ ಒಳಗೆ ಕರ್ಕಂಡ್ ಬಾ.. ಅಂವ ನಮ್ಮನೇ ಒಳಗೆ ಕಾಲಿಟ್ಟ್ ನಮ್ಮನ್ನ ಐಶ್ವರ್ಯ, ವೈಭವಲಿ ತೇಲಾಡುವಂಗೆ ಆಶೀರ್ವಾದ ಮಾಡ್ಲಿ."

ಅಂವನ ಹೆಣ್ಣ್ ಒಪ್ಪಿತ್ಲೆ.. "ಅಲ್ಲಾ. ನಾವ್ ಯಾಕೆ ಜಯನ ಕರಿಯಕ್ಕಾಗದ್?" "ಜಯ ಬಂದರೆ ನಾವ್ ಮಾಡುವ ಎಲ್ಲಾ ಕೆಲ್ಸಗಳಲ್ಲೂ ಯಶಸ್ಸ್ ಸಿಕ್ಕಿದೆ". ಇವರ ಚರ್ಚೆನ ಇಷ್ಟ್ ಹೊತ್ತ್ ಕೇಳ್ಸಿಕಂಡಿದ್ದ ಅವರ ಮುದ್ದಿನ ಗೂಡೆ ಕೂಸ್ ಹೇಳ್ತ್ "ಅಮ್ಮ ನಾವು ಪ್ರೇಮ್‌ನ ಒಳಗೆ ಕರಿಯನೊ". "ಸಂಪತ್ತ್, ಜಯ ಯಶಸ್ ತುಂಬಿ ಕಂಡಿರುವ ಮನೇಲಿ ಪ್ರೀತಿ, ವಾತ್ಸಲ್ಯ ಇಲ್ಲದಿದ್ದರೆ ಎಂತ ಪ್ರಯೋಜನ?" ಗಂಡ ಹೆಣ್ಣ್‌ಗೆ ಅವರ ಗೂಡೆ ಕೂಸ್ ಹೇಳ್ದೇ ನಿಜಾತ ಅನ್ನಿಸಿತ್.. "ನಾವ್ ನಮ್ಮ ಗೂಡೆಕೂಸ್ ಹೇಳ್ದಂಗೇ ಮಾಡ್‌ನೊ" ಸರಿತಾ ಗಂಡ ಹೇಳ್ತ್." ನೀನ್ ಹೋಗಿ ಪ್ರೇಮ್‌ನ ನಮ್ಮ ಮನೇಲಿ ಆತಿಥ್ಯ ಸ್ವೀಕರಿಸಿ ಬನ್ನಿತ ಬೇಡಿ ಒಳಗೆ ಕರ್ಕಂಡ್ ಬಾ."

ಆ ಹೆಂಗಸ್ ಹೊರಗೆ ಹೋಗಿ" ಅಣ್ಣಾ, ನೀವ್ ಮೂವರ್‌ಲಿ ಪ್ರೇಮ್ ಯಾರ್? ನೀವ್ ದಯವಿಟ್ಟ್ ಒಳಗೆ ಬಂದ್ ನಮ್ಮ ಅತಿಥ್ಯನ ಸ್ವೀಕರಿಸಿ"ತೇಳಿ ಕೇಳಿ ಕಂಡತ್.

ಆಗ ಪ್ರೇಮ್ ಎದ್ದ್ ನಿತ್ತ್ ಅವರ ಮನೆಕಡೆಗೆ ನಡ್‌ತ್. ಉಳಿದ ಇಬ್ಬರು ಕೂಡ ಎದ್ದ್ ಅಂವನ ಹಿಂದೇ ನಡ್ದ್ ಬಂದೊ. ಇದ್ನ ನೋಡಿ ಆ ಹೆಂಗಸ್‌ಗೆ ಆಶ್ಚರ್ಯ ಆಗಿ ಅವು "ನಾನ್ ಬರೀ ಪ್ರೇಮ್‌ನ ಒಳಗೆ ಕರ್ದದ್.. ನೀವೂ ಬರ್‍ತಾ ಒಳರಿ?" ತೇಳಿ ಕೇಳ್ತ್.

ಆಗ ಜಯ ಹೇಳ್ತ್" ನೀವ್ ಬರೀ ಸಂಪತ್‌ನ ಅಥವಾ ನನ್ನ ಕರ್ದಿದ್ದರೆ ಉಳ್ದ ಇಬ್ಬರು ಹೊರಗೇ ಇರ್‍ತಿದ್ದೊ.. ಆದರೆ, ನೀವ್ ಪ್ರೇಮ್‌ನ ಕರ್ದರಿ. ಪ್ರೇಮ್ ಎಲ್ಲೆಲ್ಲಿ ಇದ್ದದೆ ನಾನೂ, ಮತ್ತೆ ಸಂಪತ್ ಅಲ್ಲೆಲ್ಲಾ ಹೋದವೆ".

ಪ್ರೇಮ ಎಲ್ಲಿದ್ದದೆ, ಅಲ್ಲೆಲ್ಲಾ ಸಂಪತ್ತ್ ಮತ್ತೆ ಜಯ ಸದಾ ಇದ್ದದೆ. ನಾವೆಲ್ಲವೂ ಕೂಡ ಪರಸ್ಪರ ಪ್ರೀತಿ, ಪ್ರೇಮನ ಬೆಳೆಸಿಕಂಡ್ ಹೊಸ 2000ವರ್ಷಕ್ಕೆ ಕಾಲಿಡ್ನೊ ಅಲಾ?.

**ಎಡಿಕೇರಿ ಸುದರ್ಶನ್, ಬೆಂಗಳೂರು**

---

### ಉಳುವಾರನ ಬಿ. ತಿಮ್ಮಪ್ಪ ಇನ್ನಿಲ್ಲ

ಕಲ್ಲುಗುಂಡಿಯಲ್ಲಿರುವ ಉಳುವಾರನ ಬಿ. ತಿಮ್ಮಪ್ಪನವರು ಜನವರಿ 13ರಂದು ದೈವಾಧೀನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ದಿವಂಗತರು ಪತ್ನಿ, ಮಗು, ತಂದೆ, ತಾಯಿ, ಓರ್ವ ಅಣ್ಣ, ಇಬ್ಬರು ಅಕ್ಕಂದಿರನ್ನು ಅಗಲಿದ್ದಾರೆ. ಇವರಿಗೆ ಹೋದ ವರ್ಷವಷ್ಟೇ ಮದುವೆಯಾಗಿತ್ತು. ಒಂದೂವರೆ ತಿಂಗಳ ಮಗ ಇದ್ದು ಅದಕ್ಕೆ ಇನ್ನೂ ನಾಮಕರಣ ಆಗಿರಲಿಲ್ಲ.

ತಿಮ್ಮಪ್ಪನವರು ಮದೆ ನಾಡಿನ ಮದೆ ಮಹೇಶ್ವರ ವಿದ್ಯಾಲಯದಲ್ಲಿ ಅರ್ಥಶಾಸ್ತ್ರ ಉಪನ್ಯಾಸಕರಾಗಿದ್ದರು. ಕೇವಲ 32ವರ್ಷ ಪ್ರಾಯದವರಾಗಿದ್ದ ತಿಮ್ಮಪ್ಪನವರು ದೈವಾಧೀನರಾದುದು ತುಂಬಲಾರದ ನಷ್ಟ ಎಂದು ಬಂಧು ಬಳಗ ಶೋಕಿಸುತ್ತಿದೆ. ಕೆಲವು ಸಮಯದ ಹಿಂದೆ ನಾಯಿ ಮರಿ ಕಚ್ಚಿದುದೇ ಇವರ ಬದುಕಿಗೆ ದುರಂತವಾಯಿತು. ದುಃಖ ಸಾಗರದಲ್ಲಿರುವ ಅವರ ಕುಟುಂಬ ಬೇಗನೆ ಚೇತರಿಸಿಕೊಳ್ಳಲೆಂದು ನಮ್ಮ ಹಾರೈಕೆ.

**ಬಾರಿಯಂಡ ಜೋಯಪ್ಪ, ಮದೆ**

### ಕೈಲಾಸವಾಸಿ

ಗುಡ್ಡೆ ಹೊಸೂರು ನಿವಾಸಿ ಕೈಬಿಲಿ ತಿಮ್ಮಯ್ಯನವರ ಧರ್ಮಪತ್ನಿ ಬೋಜಮ್ಮನವರು ಜನವರಿ 16ರಂದು ರಾತ್ರಿ ನಿಧನರಾದರು. ಅವರಿಗೆ 55ವರ್ಷ ಪ್ರಾಯವಾಗಿತ್ತು. ಇವರು ಪತಿ ಹಾಗೂ ಮೂರು ಜನ ಗಂಡು ಮಕ್ಕಳನ್ನು ಮತ್ತು ಸೊಸೆಯನ್ನು ಹಾಗೂ ಅಪಾರ ಬಂಧು ಬಳಗದವರನ್ನು ಅಗಲಿದ್ದಾರೆ ಎಂದು ತಿಳಿದು ಬಂದಿದೆ.

**ಕುಂಬಗೌಡನ ಸೋಮಣ್ಣ, ಕುಶಾಲನಗರ**



# ಪತ್ರ ವಿಭಾಗ :



### ಶುಭಾಶಯಗಳು

ನಮ್ಮ ನಾಡಿನ ಪ್ರತಿಯೊಬ್ಬ ಪ್ರಜೆಗಳಿಗೆ ಹೊಸ ವರ್ಷದ ಶುಭಾಶಯಗಳೊಂದಿಗೆ, ಪ್ರತಿಯೊಬ್ಬರಿಗೂ ಸುಖ, ಶಾಂತಿ, ನೆಮ್ಮದಿ, ಭಾಗ್ಯ, ಆಯುಷ್ಯ, ಸಂತೋಷ ಲಭಿಸಲಿ ಮತ್ತು ನಾಡಿನಲ್ಲಿರುವ ಹೊಸ ಪ್ರತಿಭೆಗಳು ಮುಂದೆ ಬರಲಿ. ನಮ್ಮ ಸಂಗಾತಿಗೆ ಒಳ್ಳೆಯ ಬರಹಕಾರರು ಸಿಗಲಿ. ಕವಿಗಳು ತಮ್ಮ ಅದ್ಭುತವಾದ ಕವನಗಳನ್ನು, ಲೇಖಕರು ಒಳ್ಳೆಯ ಕಥೆಗಳನ್ನು ಕಳುಹಿಸಿ ಸಂಗಾತಿಯನ್ನು ದಿಗಂತದತ್ತ ಬೆಳಸಲಿ ಎಂದು ಹಾರೈಸುತ್ತೇವೆ. ನಾಡಿನ ಜನತೆ ಹೊಸ ಶತಮಾನದಲ್ಲಿ ಹೊಸದನ್ನು ಮಾಡಿ ತೋರಿಸಲಿ. ಹಳೆಯದನ್ನು ಮರೆಯದೆ ಹೊಸದನ್ನು ಕಲಿಯೋಣ. ಏಕೆಂದರೆ, ಪ್ರತಿಯೊಬ್ಬರಿಂದ ನಾವು ಏನನ್ನಾದರೂ ಕಲಿಯಬಹುದು. "There is nobody in the world who knows nothing & there is nobody in the world who knows everything. Everybody knows something which you don't know. Hence try to learn that something from everybody".

**ಉಳುಪಾರನ ತನುಜ ಜನಾರ್ಧನ್, ಕುಶಾಲನಗರ**

### ಪತ್ರಿಕಾ ಶ್ರಮ

ಆತ್ಮೀಯರೆ,

ತಾ 26-12-99ರಂದು ಮಡಿಕೇರಿಯ ಗೌಡ ವಿದ್ಯಾಸಂಘದಲ್ಲಿ ನಡೆಸಲಾದ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಮುಖಾಮುಖಿ ಕಾರ್ಯಕ್ರಮವು ಬಹಳ ಸ್ವಾರಸ್ಯವಾಗಿ ಮೂಡಿ ಬಂತು ಮತ್ತು ಮುಂದೆ ಅದರ ಫಲಿತಾಂಶ ಸಂಗಾತಿಯ ಬೆಳವಣಿಗೆಗೆ ಮೆಟ್ಟಿಲುಗಳಾಗಿ ನಿಲ್ಲಬಲ್ಲದು.

ಪರಿಶುದ್ಧ ಅರೆಭಾಷೆಯಲ್ಲಿಯೇ ನಡೆದ ಮುಖಾ ಮುಖಿ ಸಮಾರಂಭದಲ್ಲಿ ವೇದಿಕೆಯ ಮೇಲಿದ್ದ ಪತ್ರಿಕಾ ಸಂಪಾದಕ ವೃಂದ, ಪ್ರಶ್ನೆ ಮತ್ತು ವಿಮರ್ಶೆ ಮಾಡುವವರು ಸಭೆಯಲ್ಲಿದ್ದರೆ, ಮಧ್ಯದಲ್ಲಿ ಬಾರಿಯಂಡ ಶ್ರೀ ಜೋಯಪ್ಪ ಮತ್ತು ಶ್ರೀ ಗುಡ್ಡೆಮನೆ ರಮೇಶ್‌ರವರು ಬಹಳ ಸ್ವಾರಸ್ಯಕರವಾಗಿ ಸಂಯೋಜನೆ ಮಾಡಿದರು. ಇದನ್ನು ವೀಡಿಯೋ ಕ್ಯಾಸೆಟ್ ಮಾಡದೇ ಇದ್ದದ್ದು ಈಗ ಯೋಚಿಸಿದರೆ ಪಶ್ಚಾತ್ತಾಪವೆನಿಸುತ್ತದೆ.

ಪತ್ರಿಕೆ, ಸಂಪಾದಕ, ಪತ್ರಕರ್ತ ಇವರುಗಳಿಗೆ ಇರುವಂತಹ ಸಮಸ್ಯೆಗಳು ಎದುರಿಸಬೇಕಾದ ಕಷ್ಟಗಳು ಸಾರ್ವಜನಿಕರಲ್ಲಿ ಅನುಸರಿಸಬೇಕಾದ ವಿಧಗಳು ಅಂದರೆ ಒಬ್ಬಳು ಹೆಂಗಸು ಹೆರಿಗೆಯಾಗಬೇಕಾದರೆ ಎಷ್ಟು ಯಾತನೆಗಳನ್ನು ಅನುಭವಿಸಬೇಕು. ಸಂಭಂದಿಕರಿಗೆ ತಾಯಿಯೂ ಬೇಕು, ಈ ಕಡೆ ಮಗುವೂ ಬೇಕು ಎಂಬ ಭಾವನೆಗಳಿರುತ್ತವೆ. ಅದೇ ರೀತಿ ಇಲ್ಲಿ ಪತ್ರಿಕೆಯೂ ಬೇಕು ಜನರಲ್ಲಿ ಉತ್ತಮ ಮತ್ತು ಸ್ವಾರಸ್ಯಕರವಾದ ಸಂಚಿಕೆ ಅಗ್ಗದ ದರದಲ್ಲಿ ಪ್ರಕಟಿಸಬೇಕು ಎಂಬ ಬೇಡಿಕೆಗಳನ್ನು ನಿವಾರಿಸಬೇಕಾದರೆ ಪತ್ರಿಕಾ ವರ್ಗ ಎಷ್ಟು ಶ್ರಮ ವಹಿಸಬೇಕು ಮತ್ತು ಅದಕ್ಕೆ ಉತ್ತಮ ಲೇಖನಕಾರರು ಬೇಕೆಂಬುದು ಸಮಂಜಸವಾಗಿ ನಮ್ಮ ಜನಾಂಗದವರಿಗೆ ಮನದಟ್ಟಾಯಿತು.

ಆದರೆ ಒಟ್ಟು 2000ಪ್ರಿಂಟಿಂಗ್, ಅದರಲ್ಲಿ 1200 ಚಂದಾದಾರರಿರುವ ಕೊಡಗಿನಲ್ಲಿ ಕೆಲವೇ ಜನರು ಭಾಗವಹಿಸಿರುವುದು ತುಂಬಾ ಬೇಸರದ ಸಂಗತಿಯಾದರು ಮುದ ನೀಡಿತ್ತು ಮತ್ತು ಮುಖಾ ಮುಖಿಯು ಚೆನ್ನಾಗಿ ಮೂಡಿಬಂದಿದೆ ಎಂಬುದಾಗಿ ಗಾಳಿ ಸುದ್ದಿಯಾಗಿ ಹರಡಿರುವುದರಿಂದ ನಮ್ಮ ಗೌಡ ಸಂಘಗಳಿರುವ ಎಲ್ಲಾ ಕೇಂದ್ರಗಳಲ್ಲಿ ಸಮಯಾನುಸಾರ ಸಂಗಾತಿಯ ಮುಖಾ ಮುಖಿ ಚರ್ಚೆಯನ್ನು ನಡೆಸಿ ಕೊಡಬೇಕಾಗಿ ನನ್ನ ಕೋರಿಕೆಯನ್ನು ನಿಮ್ಮ ಮುಂದಿಡುತ್ತಿದ್ದೇನೆ.

**ಕುದುಪಜೆ ಬಸಪ್ಪ, ಪತ್ರಕರ್ತ, ಕುಶಾಲನಗರ**

(ವಿಷಯ ಸೂಚನೆ : ಸಂಗಾತಿಯನ್ನು ಈ ಮೇಲಿನ ವಿಷಯಕ್ಕೆ ಆಮಂತ್ರಿಸಿದರೆ ಖಂಡಿತ ಬರಲಾಗುವುದು)

ಆತ್ಮೀಯರೆ,

ನೂರಕ್ಕೆ ಒಂದ್ ಒಳ್ಳ ವಸ್ತು ಮಾತ್ರ ಸಿಕ್ಕುದು. ಅದ್ ನಾವೆಲ್ಲಾ ಸೇರಿ ಕಟ್ಟಿದ ಕಾವೇರಿ ನಾಡೇತ ಹೇಳಕ್. ಯಾರನ್ನ್ ಮತ್ತೆ ಯಾವ ವಿಷಯಲಿ ಬರಿಯೊಕಾದರೆ ಅದನ್ನ ಸರಿಯಾಗಿ ಅರ್ಥ ಮಾಡಿಕಣೊಕು, ಗ್ಯಾನ ಬಂದಂಗೆ ಬರೆಯೋದ್ ಸರಿಯಾಕಿಲ್ಲೆತ ನನ್ನ ನಂಬಿಗೆ.

ಇದಕ್ಕೆಲ್ಲಾ ಕಾರಣ ನಮ್ಮ ಕಾವೇರಿ ನಾಡಿಗೆ ಬಂದ ಗುಡ್ಡೇರ ರಮೇಶ್‌ನ ಕಾವೇರಿನಾಡ್‌ನ ಬಗ್ಗೆ ಬರೆದ ವಿಷಯ ಓದಿ ಕುಷಿಪಡೋಕಾ ಅಥವಾ ಬೇಜಾರ್ ಪಡೋಕಾತಗೊತ್ತಾಲ್ಲೆ.

ಇರಲಿ, ತಲಕಾವೇರಿಯಿಂದ 350 K.M. ದೂರಲಿ ಬಂದ್ ನಮ್ಮ ಗೌಡ ಜನಾಂಗದ ಹೆಸರ್ ಉಳ್‌ಸ್‌ಕ್ಕೆಂತೇಳಿ, ಕಾಡ್ ಕಡ್ದ್ ನಾಡ್ ಮಾಡ್ದ್ ವಿಷ್ಯ ನಿಮಿಗೆಲ್ಲಾ ಗೊತ್ತಿದ್ದದೆ. ಅರೆಭಾಷೆಲಿ ಹಾಡ್ ಮಾಡಿ, ಧ್ವನಿ ಸುರುಳಿ ಮಾಡಿ, ನಮ್ಮವರ ಎಲ್ಲಾ ಕಾರ್ಯಕ್ರಮಗಳ್‌ಲಿ ಪ್ರಚಾರ ಮಾಡಿ 4ವರ್ಷಂದ ಪಟ್ಟ ಪ್ರಯತ್ನ ಯಾರಿಗೂ ಮಾಡಿಕೆ ಸಾಧ್ಯ ಇಲ್ಲೆ. ಥಂಗೀರ್ ಕಾಕನ. ಅವ್ ಮಾಡ್‌ದ ಒಂದು ಪ್ರಯತ್ನಕ್ಕೆ ನಾವೆಲ್ಲಾ ಬೆಂಗಾವಲಾಗಿ ನಮ್ಮ ಕೈಲಾದ ರೀತಿಲಿ ಬೆಂಗಾವಲಾಗಿ ಇರ್ದು ಒಳ್ಳೇದ್, ಕ್ಯಾಸೆಟ್‌ಗೆ ಜಾಸ್ತಿ ರೇಟ್ ಆತ್, ಲೆಕ್ಕ ಪತ್ರ ತೋರ್ಸ್ಬೋಕು. ಶೋಷಣೆ ಮಾಡ್ದ್, ಅಂತ ಹೇಳಿ ಅಪನಂಬಿಕೆ ಬರುವ ರೀತೀಲಿ ನಡ್ ಕಂಬೋದು ಒಳ್ಳೆದಲ್ಲತ. ನಾವಿಲ್ಲಿ ಬೆಂಗಳೂರ್‌ಲ್ಲಿ ಇದ್ದ್ ಇಷ್ಟ್ ಮಾಡುತ್ತಿರ್ದು ನಮಗಾಗಿಯಲ್ಲ. ನಮ್ಮ ಜನಾಂಗಕ್ಕಾಗಿ, ದೂರ ದರ್ಶನಲಿ ಡೆನ್ನಾನೋ ಹಾಗೂ ಸುಗ್ಗಿ ಸುವ್ವಾಲೆ ಕುಣಿತ ಹಾಡ್‌ನ ಪ್ರಚಾರ ಮಾಡ್ದು ನಾವು ವರ್ಷಕ್ಕೊಂದು ಬೆಳೆ ತೆಗೆದಂಗಲ್ಲಾ, ಅದ್ ನಮ್ಮ

20ನೇ ಪುಟಕ್ಕೆ



# ವನಿತಾ ಲೋಕ : ಗೃಹ ಸಂಗಾತಿ : ತಂಪು ಪಾನೀಯಗಳು

## ಟೊಮೆಟೊ ಜ್ಯೂಸ್

**ಬೇಕಾಗುವ ಸಾಮಾನುಗಳು :** ಜ್ಯೂಸ್ ಮಾಡಲು ಬೇಕಾಗುವಷ್ಟು ಟೊಮೆಟೋ, ರುಚಿಗೆ ಬೇಕಾಗುವಷ್ಟು ಸಕ್ಕರೆ, ಕರಿಮೆಣಸಿನ ಪುಡಿ ಮತ್ತು ಉಪ್ಪು.

ವಿಧಾನ : ಟೊಮೆಟೊವನ್ನು ಸ್ವಲ್ಪ ಬೇಯಿಸಿ ಸಿಪ್ಪೆ ಸುಲಿಯಿರಿ. ಬಳಿಕ ಅವುಗಳನ್ನು ಹಿಸುಕಿ ಅದಕ್ಕೆ ಸ್ವಲ್ಪ ನೀರು ಸೇರಿಸಿ 5 ನಿಮಿಷಗಳ ಕಾಲ ಬೇಯಿಸಿ ಕೆಳಗಿಳಿಸಿ. ಪ್ರತಿಯೊಂದು ಲೀಟರ್ ಈ ಮಿಶ್ರಣಕ್ಕೆ ¼ಲೀ. ನೀರು 15ಗ್ರಾಂ ಸಕ್ಕರೆ, ರುಚಿಗೆ ಬೇಕಾಗುವಷ್ಟು ಉಪ್ಪು ಮತ್ತು 1ಚಿವುಟು ಕರಿಮೆಣಸಿನ ಚೂರ್ಣ, ಇವುಗಳನ್ನು ಸೇರಿಸಿ ಮಿಶ್ರಮಾಡಿ ಕಲಕಿಸಿ. ಈಗ ಅದನ್ನು ಗಾಜಿನ ಟಂಬ್ಲರುಗಳಲ್ಲಿ ಹೊಯ್ದು ಅದಕ್ಕೆ "ಐಸ್" (ಮಂಜುಗೆಡ್ಡೆ, ಬರ್ಫ) ಹಾಕಿ ಕುಡಿಯಲು ಕೊಡಿ.

## ಬಾದಾಮ್ ಖೀರ್

**ಬೇಕಾಗುವ ಸಾಮಾನು :** 2ಲೀ. ಹಾಲು; ½ ಕಿ. ಗ್ರಾಂ ಬಾದಾಮಿ, 6ಏಲಕ್ಕಿ ಕೋಡು(ಪುಡಿಮಾಡಿ); ಸ್ವಲ್ಪ ಅರಿಸಿನ ಪುಡಿ, ರುಚಿಗೆ ಬಾಕಾಗುವಷ್ಟು ಸಕ್ಕರೆ.

ವಿಧಾನ : ಬಾದಾಮನ್ನು ಬೇಯಿಸಿ ಸಿಪ್ಪೆ ಸುಲಿದು ದೊರಗಾಗಿ ಅರಿಯಿರಿ. ಅದಕ್ಕೆ ಹಾಲು ಮತ್ತು ಸ್ವಲ್ಪ ಅರಿಸಿನ ಪುಡಿ ಸೇರಿಸಿ ಕಲಕಿಸಿ. 30-45 ನಿಮಿಷಗಳ ಕಾಲ ಬೇಯಿಸಿ ಅದಕ್ಕೆ ಸಕ್ಕರೆ ಸೇರಿಸಿ ಕರಗಿಸಿ ಕೆಳಗಿಳಿಸಿ. ಅದರ ಮೇಲೆ ಏಲಕ್ಕಿ ಪುಡಿಯನ್ನು ಸಿಂಪಡಿಸಿ.

## ಹಣ್ಣು ಹಂಪಲುಗಳ ಪಾನೀಯ

**ಬೇಕಾಗುವ ಸಾಮಾನು :**1 ಪಪ್ಪಾಯಿ ಹಣ್ಣು (ಪರಂಗಿ ಹಣ್ಣು) 3 ಕಿತ್ತಳೆ ಹಣ್ಣು, 1 ನಿಂಬೆಹಣ್ಣು, 1 ಊ.ಚ. ಜೇನುತುಪ್ಪ

**ವಿಧಾನ :** ಪಪ್ಪಾಯಿಯ (ಪರಂಗಿ ಹಣ್ಣಿನ) ಸಿಪ್ಪೆ ಸುಲಿದು ಕತ್ತರಿಸಿ ಹಿಸುಕಿ ಮುಳ್ಳು ಚಮಚದ ಮೂಲಕ ಹೊಡೆದು ಇಟ್ಟುಕೊಳ್ಳಿ. ಕಿತ್ತಳೆ ಹಣ್ಣಿನ ಮತ್ತು ನಿಂಬೆಹಣ್ಣಿನ ರಸ ಹಿಂಡಿ ತೆಗೆದು ಪಪ್ಪಾಯಕ್ಕೆ ಹಾಕಿ ಮಿಶ್ರಮಾಡಿ, ಈಗ ಜೇನುತುಪ್ಪ ಸೇರಿಸಿ ಹೊಡೆದು ಗ್ಲಾಸ್‌ನಲ್ಲಿ ಹಾಕಿ ಕುಡಿಯಲು ಕೊಡಿ.

## ಬಾದಾಮು ಶರಬತ್

**ಬೇಕಾಗುವ ಸಾಮಾನು :** ½ ಲೀಟರ್ ತೆಳ್ಳಗಿನ ಹಾಲು. 50ಗ್ರಾಂ ಒಳ್ಳೆಯ ಬಾದಾಮು ಬೀಜ, 5-6 ಏಲಕ್ಕಿ( ಹಸಿರು) 5-6 ಟೀ.ಚ ಸಕ್ಕರೆ, ಸ್ವಲ್ಪ ಎಸೆನ್ಸ್ ಮತ್ತು ನಿಮಗಿಷ್ಟವಿರುವ ಬಣ್ಣ.

ವಿಧಾನ : ಹಾಲನ್ನು ಕುದಿಸಿ, ಆರಿಸಿ ಬಾದಮು ಬೀಜಗಳನ್ನು 2ತಾಸು ನೀರಿನಲ್ಲಿ ನೆನೆಸಿಟ್ಟು, ತುರಿದು, ನುಣ್ಣಗೆ ಅರೆಯಿರಿ. ಏಲಕ್ಕಿ ಬೀಜಗಳನ್ನು ಚೆನ್ನಾಗಿ ಪುಡಿಮಾಡಿ. ಈಗ ಹಾಲಿಗೆ ಬಾದಾಮು ಮಿಶ್ರಣ ಹಾಕಿ, 10-15 ನಿಮಿಷ ಸಣ್ಣಗೆ ಕುದಿಸಿ ಕೆಳಗಿಳಿಸಿ. ಇದಕ್ಕೆ ಸಕ್ಕರೆ, ಬಣ್ಣ(ಸ್ವಲ್ಪ) ಸ್ವಲ್ಪವೇ ಸ್ವಲ್ಪ ಉಪ್ಪು ಸೇರಿಸಿ ಚೆನ್ನಾಗಿ ಕದಡಿ, ತಣ್ಣಗಾಗಿಸಿ ಕುಡಿಯಲು ಕೊಡಿ. ಫ್ರಿಜ್‌ನಲ್ಲಿ ತಣ್ಣಗೆ ಮಾಡಿದರೆ ಇನ್ನೂ ಒಳ್ಳೆಯದು.

## ಮಜ್ಜಿಗೆ ಮಜಾ

**ಬೇಕಾಗುವ ಸಾಮಾನು :** 4ಗ್ಲಾಸು ಒಳ್ಳೆಯ ಮೊಸರು ಅಥವಾ ತಯಾರಿಸಿದ ಮಜ್ಜಿಗೆ ½ ಹಸಿ ಶುಂಠಿ, 2-3 ಹಸಿ ಮೆಣಸಿನಕಾಯಿ ½ ಸೂಡಿ ಕೊತ್ತಂಬರಿ, ಜೀರಿಗೆ, ಹಿಂಗು, ಉಪ್ಪು, ಸ್ವಲ್ಪ ಸಕ್ಕರೆ, 4 ಟೀ.ಚ. ನಿಂಬೆರಸ

ವಿಧಾನ : ಮೇಲೆ ಹೇಳಿದಂತೆ ಮಜ್ಜಿಗೆ ತಯಾರಿಸಿ, ತಯಾರಿಸಿದ ಮಜ್ಜಿಗೆ ಇದ್ದಲ್ಲಿ ಹಸಿ ಶುಂಠಿ, ಕೊತ್ತಂಬರಿ, ಹಸಿ ಮೆಣಸಿನಕಾಯಿಗಳನ್ನು ನುಣ್ಣಗೆ ಪೇಸ್ಟ್ ತರಹ ಮಾಡಿ. ಜೀರಿಗೆಯನ್ನು ಹುರಿದು, ಜಜ್ಜಿ ಪುಡಿಮಾಡಿ, ಉಪ್ಪು, ನಿಂಬೆರಸ, ಸಕ್ಕರೆಗಳನ್ನು ಸೇರಿಸಿ ಮಜ್ಜಿಗೆಯನ್ನು ಕದಡಿ, ಈಗ ಸ್ವಲ್ಪ (1ಟೀ.ಚ) ತುಪ್ಪದಲ್ಲಿ ಹಿಂಗು, ಶುಂಠಿ ಮಿಶ್ರಣ ಬೇಕಿದ್ದರೆ ಸ್ವಲ್ಪ ಅರಿಸಿನ ಪುಡಿಯನ್ನು ಒಗ್ಗರಣೆ ಹಾಕಿ, ಜೀರಿಗೆ ಪುಡಿಯನ್ನು ಸೇರಿಸಿ, ಚೆನ್ನಾಗಿ ಮಿಕ್ಸ್ ಮಾಡಿ, ಎಲ್ಲವನ್ನೂ ಒಟ್ಟಿಗೆ ತಿರುವಿ, ತಣ್ಣಗಾಗಿಸಿ ಕುಡಿಯಲು ಕೊಡಿ. ಫ್ರಿಜ್‌ನಲ್ಲಿ ತಣ್ಣಗಾಗಿಸಿ ಐಸ್‌ಕ್ಯೂಬ್ ಹಾಕಿ ಕುಡಿದರೆ ಇನ್ನೂ ಒಳ್ಳೆಯದು.

## ಕ್ಯಾರೆಟ್ ಶರಬತ್

**ಬೇಕಾಗುವ ಸಾಮಾನು :** 4ಗ್ಲಾಸು ಹಾಲು(ತೆಳ್ಳಗಿದ್ದರೆ ಒಳ್ಳೆಯದು) 4 ಗಜ್ಜರಿ, ಸಿಹಿಯಾಗಿ ರಸಭರಿತವಾದ್ದು, 5-6 ಊ.ಚ. ಸಕ್ಕರೆ4 ಏಲಕ್ಕಿ, ಸ್ವಲ್ಪ ಜಾಕಾಯಿ.

**ವಿಧಾನ :** ಹಾಲನ್ನು ಕಾಯಲು ಇರಿಸಿ, ಗಜ್ಜರಿಯ ಹಸಿರು ಭಾಗವನ್ನು ತೆಗೆದು, ಮೇಲ್ಪದರವನ್ನು ತುರಿದು, ಕೊಬ್ಬರಿ ತುರಿಯುವ ಮಣೆಯಿಂದ ಸಣ್ಣಗೆ ತುರಿಯಿರಿ, ಇಲ್ಲವೇ ಸಣ್ಣ ಸಣ್ಣ ಹೋಳುಗಳಾಗಿ ಮಾಡಿ, ಏಲಕ್ಕಿಯನ್ನು ಜಾಕಾಯಿ ಜೊತೆಗೆ ಸಣ್ಣಗೆ ಪುಡಿಮಾಡಿ, ಈಗ ಮಿಕ್ಸರ್‌ನಲ್ಲಿ ಎಲ್ಲವನ್ನೂ ಒಟ್ಟಿಗೆ ಸೇರಿಸಿ, ನುಣ್ಣಗೆ ರುಬ್ಬಿ ಹಾಲಿಗೆ ಸೇರಿಸಿ ಕದಡಿ. 11-15 ನಿಮಿಷ ಚೆನ್ನಾಗಿ ಕುದಿಸಿ ಕೆಳಕ್ಕಿಳಿಸಿ, ತಣ್ಣಗಾಗಿಸಿ ಕುಡಿಯಲು ಕೊಡಿ, ಫ್ರಿಡ್ಜ್‌ನಲ್ಲಿ ತಂಪು ಮಾಡಿ ಕುಡಿದರೆ ಇನ್ನೂ ಒಳ್ಳೆಯದು.

## ಮಸಾಲೆ ಮಜ್ಜಿಗೆ

**ಬೇಕಾಗುವ ಸಾಮಾನು :** 3 ಕಪ್ ಒಳ್ಳೆಯ ಮೊಸರು 3ಕಪ್ ತಣ್ಣಗಿನ ನೀರು 2 ಟೀ. ಚ. ಹುರಿದು ಕುಟ್ಟಿಟ್ಟ ಜೀರಿಗೆ ½ ಟೀ. ಚ. ಕರಿಮೆಣಸು, ಉಪ್ಪು ಸಣ್ಣ ತುಂಡು ಶುಂಠಿ

ವಿಧಾನ : ಮೊದಲು ಬರೀ ಮೊಸರನ್ನು ಚೆನ್ನಾಗಿ ಕಡೆಯಿರಿ, ಇದಕ್ಕೆ ಸ್ವಲ್ಪ ಸ್ವಲ್ಪವೇ ನೀರನ್ನು ಸೇರಿಸುತ್ತಾ ಉಪ್ಪನ್ನು ಸೇರಿಸಿ, ಒಳ್ಳೆಯ ಮಜ್ಜಿಗೆ ತಯಾರಿಸಿ. ಮಜ್ಜಿಗೆ ತೀರಾ ಗಟ್ಟಿಯಾಗದಿರಲಿ, ಈಗ ಕರಿಮೆಣಸನ್ನು ಕುಟ್ಟಿ, ಸಣ್ಣಗಿನ ಪುಡಿಮಾಡಿ, ಶುಂಠಿಯನ್ನು ಸುಲಿದು, ಜಜ್ಜಿ ನುಣ್ಣಗಾಗಿಸಿ, ಈಗ ಮೆಣಸು, ಶುಂಠಿ, ಜೀರಿಗೆ ಪುಡಿಗಳನ್ನು ಮಜ್ಜಿಗೆಗೆ ಸೇರಿಸಿ, ತಣ್ಣಗಾಗಲು ಬಿಡಿ, ಫ್ರಿಡ್ಜಿನಲ್ಲಿ ಅರ್ಧ ತಾಸಿಟ್ಟು ಪುಡಿಯಾಗಿಸಿದ ಐಸ್ ಕ್ಯೂಬ್‌ಗಳನ್ನು ಹಾಕಿ ಕುಡಿದರೆ, ಬೇಸಿಗೆಗೆ ಒಳ್ಳೆಯ ತಂಪನ್ನೀಯುತ್ತದೆ.






✦ ಕೌಂಡಿನ್ಯ

## ಧಾರವಾಹಿ -23

ಎಡತೊರೆ ಬಂಗಲೆಯ ಹಾಲ್ !

ಅಲ್ಲಿ ಈಗ ಅರುಂಧತಿಯ ಫೋಟೋಕ್ಕೆ ಹಾರ ಹಾಕಲಾಗಿದೆ. ಪಕ್ಕದಲ್ಲೇ ಅವಳ ಗಂಡನ ಫೋಟೋ ಸಹ ಇದೆ !

ಅವಳ ಶವ ಸಂಸ್ಕಾರ ಮುಗಿದಿದೆ !

ಈಗ ಮನೆಯಲ್ಲಿರೋದು ಮೂವರು!

ಇಬ್ಬರು ಅರೆಹುಚ್ಚ ಅಣ್ಣಂದಿರು ಮತ್ತು ಪ್ರಸನ್ನ ! ಮೂವರ ನಡುವೆ ಮಾತಿಲ್ಲ. ಕೆಲಸಗಾರರು ಎಂದಿನಿಂದಲೋ ಮೂಗರಾಗಿದ್ದಾರೆ. ಒಂದು ರೀತಿಯ ಸ್ಮಸಾನ ಮೌನ ಆವರಿಸಿದೆ.

ಅಣ್ಣಂದಿರು ಪಿಳಿ ಪಿಳಿ ಕಣ್ಣು ಬಿಡುತ್ತಿದ್ದಾರೆ.

ಪ್ರಸನ್ನ ಈಗ ಅವರತ್ತ ತೀಕ್ಷ್ಣ ದೃಷ್ಟಿ ಬೀರಿದನು. ಏನೋ ಅನುಮಾನ ಬರುತ್ತಿದೆ ಅವನಿಗೆ !

ಅಣ್ಣಂದಿರ ನಾಟಕ ಆಡುತ್ತಿರಬಹುದೆ?

ಆದರೆ ಹಾಗೆ ಅನಿಸುತ್ತಿಲ್ಲ!

ಆದರೂ ಎಲ್ಲೋ ಏನೋ ಅನುಮಾನ!

ಪ್ರಸನ್ನ ಈಗ ಮಹಡಿಯ ಮೇಲೆ ಇದ್ದ ತನ್ನ ಅಕ್ಕನ ರೂಮಿಗೆ ಬಂದು ಡೋರ್ ಕ್ಲೋಸ್ ಮಾಡಿಕೊಂಡನು.

ಹೋಟೆಲ್‌ನ ರೂಮು !

ಎಲ್ಲಾ ರೀತಿಯ ಅನುಕೂಲ ಇದೆ !

ಪ್ರಸನ್ನ ಸಿಗರೇಟನ್ನು ಹತ್ತಿಸಿಕೊಂಡು ರೂಮಿನ ಪ್ರತಿಯೊಂದು ವಸ್ತುಗಳನ್ನು ನೋಡಲಾರಂಭಿಸಿದನು.

ಅಕ್ಕನ ಸಾವಿನ ಬಗ್ಗೆ ದುಃಖ ಇಲ್ಲ ! ತನ್ನನ್ನು ಎರಡು ಸಲ ಸಾಯಿಸಲು ಪ್ರಯತ್ನಿಸಿದವಳು ಸತ್ತರೆ ದುಃಖ ಉಂಟಾಗಲು ಸಾಧ್ಯವೆ !

ಬೀರುವಿನಲ್ಲಿ ಅರವತ್ತು ಸೀರೆಗಳು, ಒಡವೆಗಳು, ನೂರರ ನೋಟಿನ ಕಂತೆಗಳು ತುಂಬಿತ್ತು !

ಅರುಂಧತಿ ಅಲಂಕಾರಪ್ರಿಯೆ !

ಎಲ್ಲಾ ಕಡೆ ಹುಡುಕುತ್ತಿರುವಾಗ ಬೀರುವಿನಲ್ಲಿದ್ದ ಸಿಕ್ರೇಟ್ ಲಾಕರ್‌ನಲ್ಲಿ ಡೈರಿ ಕಂಡಿತು.

ಅದನ್ನು ಎತ್ತಿಕೊಂಡು ನೋಡಿದನು.

ಅರುಂಧತಿಯ ಡೈರಿ !

ಅರುಂಧತಿಯ ಕೈಬರಹ ಚೆನ್ನಾಗಿರಲಿಲ್ಲ. ಆದರೆ ಸುಲಭವಾಗಿ ಓದುವ ರೀತಿಯಲ್ಲಿ ಇತ್ತು !

ಅರುಂಧತಿ ನಿಗೂಢ ಹೆಣ್ಣು !

ಈ ಡೈರಿ ಇನ್ನೇನು ರಹಸ್ಯ ಹೇಳುತ್ತದೊ?

ಪ್ರಸನ್ನ ಈಗ ಸೋಫಾದಲ್ಲಿ ಕುಳಿತು ಸಿಗರೇಟನ್ನು ಸೇದುತ್ತಾ ಡೈರಿಯನ್ನು ಓದಲಾರಂಭಿಸಿದನು.

ಡೈರಿಯ ಪುಟಗಳಲ್ಲಿ....!

ಪ್ರಾರಂಭದಲ್ಲಿ ನನಗೆ...ನನಗೆ ಪ್ರಸನ್ನನ ಮೇಲೆ ಕೋಪ ಬರುತ್ತದೆ . ಅವನು ನನ್ನ ತಮ್ಮ ಆದರೂ ಸಹ ತುಂಡು, ತುಂಡಾಗಿ ಕತ್ತರಿಸಬೇಕು ಎನಿಸುತ್ತಿದೆ.

ಅವನೊಬ್ಬ ಹಿಟ್ಲರ್ !

ಅವನಿಗೆ ವಿಪರೀತ ದುರಾಸೆ !

ಸ್ವಂತ ಅಕ್ಕನಿಗೆ ಪಾಲು ಕೊಡಲಿಲ್ಲ !

ಇನ್ನೊಂದು ಪುಟದಲ್ಲಿ - ವೀರಭದ್ರ, ಲಿಂಗಯ್ಯನಿಗೆ ಬುದ್ಧಿ ಭ್ರಮಣೆಯಾಗಿದೆ. ಅವರಿಬ್ಬರು ಕೆಲವು ತೊಲಗಳು ಬೆಲೆ ಬಾಳುವ ನಿಧಿ ಕಂಡ ಕೂಡಲೇ ಅತಿಯಾದ ದುರಾಸೆಯಿಂದ ಮಾನಸಿಕ ಸಮತೋಲನ ಕಳೆದುಕೊಂಡರು.

ನಿಧಿ ಇದ್ದರೂ ಅನುಭವಿಸಲಾರರು!

ಅವರೊಂದು ರೀತಿ ಭಾವನೆಗಳಿಲ್ಲದ ಗೊಂಬೆಗಳು !

ಪ್ರಸನ್ನನಿಗೂ ತುಂಬಾ ಅನುಕೂಲ ವಾಯಿತು;

ಮತ್ತೊಂದು ಪುಟದಲ್ಲಿ- ನ್ಯಾಯವಾಗಿ ನಿಧಿಯನ್ನು ನಾಲ್ಕು ಸಮಪಾಲು ಮಾಡ ಬೇಕಿತ್ತು !

ಇಬ್ಬರಿಗೂ ಹುಚ್ಚು ಹಿಡಿಯಿತು !

ಅವರಿಗೇನು ಕೊಡಬೇಕಾಗಿಲ್ಲ !

ಆದರೆ ಎಲ್ಲಾ ರೀತಿಯಿಂದಲೂ ಚೆನ್ನಾಗಿರುವ ನನಗೆ ನನ್ನ ಗಂಡನಿಗೆ ಪಾಲು ಕೊಡಬಹುದಿತ್ತಲ್ಲ !

ಅವನಿಗೆ ಮನಸ್ಸೆ ಬರಲಿಲ್ಲ !

ನಾನು ಏನಾದರೂ ಮಾಡಲೇಬೇಕು.

ಇನ್ನೊಂದು ಪುಟದಲ್ಲಿ ನನಗೆ ಆಲೋಚನೆ ಬಂದಿತು. ಅದನ್ನು ನನ್ನ ಗಂಡನಿಗೆ ತಿಳಿಸಿದೆ

ನನ್ನ ಗಂಡ ನಾಟಕ ಆಡುತ್ತಿದ್ದಾರೆ !

ಹುಚ್ಚನ ಪಾತ್ರ !

ವೀರಭದ್ರ, ಲಿಂಗಯ್ಯನ ಜೊತೆ ನನ್ನ ಗಂಡ ಸಹ ಅರೆ ಹುಚ್ಚನಂತೆ ನಾಟಕ ಆಡುತ್ತಿದ್ದಾರೆ.

ಈ ನಾಟಕದ ಉದ್ದೇಶ ಇಷ್ಟೆ !

ಸಮಯ ನೋಡಿಕೊಂಡು ಪ್ರಸನ್ನನನ್ನು ಸಾಯಿಸಬೇಕು. ಈ ನಿಧಿಯನ್ನೆಲ್ಲಾ ನಾವು ಅಪಹರಿಸಬೇಕು !

ಆದರೆ ನನಗೆ ಅವಕಾಶ ಸಿಗುತ್ತಿಲ್ಲ !

ಮತ್ತೊಂದು ಪುಟದಲ್ಲಿ ನನಗೆ ದುಃಖಕ್ಕಿಂತ ಭಯವಾಗುತ್ತಿದೆ. ನನ್ನ ಗಂಡನ ಭಯಾನಕ ಸಾವು !

ಇದು....ಇದು ಹೇಗಾಯಿತು !

ಇದು ಮಾಯಾ ಜಾಲದಂತೆ ಕಾಣುತ್ತಿದೆ.

(18ನೇ ಪುಟಕ್ಕೆ)

ಇಲ್ಲಿಯವರೆಗೆ.........

ಅರುಂಧತಿನ್ನು ಕಾಡಿನಲ್ಲಿ ಯಾರೋ ಹಿಂಬಾಲಿಸಿಕೊಂಡು ಬರುತ್ತಾರೆ ಹೊಡೆದು ಪ್ರಜ್ಞೆ ತಪ್ಪಿಸುತ್ತಾರೆ. ಊರಿನವರು ಭಯಾನಕ ದೃಶ್ಯ ನೋಡುತ್ತಾರೆ ಅರುಂಧತಿಗೆ ಹಾವುಗಳು ಸುತ್ತಿಕೊಂಡಿರುತ್ತದೆ. ಅವಳು ಸತ್ತು ಹೋಗುತ್ತಾಳೆ. ರೇವತಿಗೆ ಈಗ ಈ ಸನ್ನಿವೇಶದಿಂದ ಕೆಲವು ಸಂದೇಹಗಳು ಬರುತ್ತದೆ.

ಮುಂದೆ ಓದಿ..........

# ಕೊಡಗು ಪ್ರತ್ಯೇಕ ರಾಜ್ಯ - ಬೇಕೇ? ಬೇಡವೇ?

ನಾನು ಈಗ ಕೆಲವು ವರುಷಗಳಿಂದ ಕೊಡಗು ರಾಜ್ಯದ ವಿಷಯದಲ್ಲಿ ಕೊಡಗು ರಾಜ್ಯ ಮುಕ್ತಿ ಮೋರ್ಚಾದ ಮುಖಾಂತರ ಹೋರಾಟ ನಡೆಸಿರುವ ಸುದ್ದಿಯನ್ನು ಪತ್ರಿಕೆಗಳೆಲ್ಲಾ ಓದುತ್ತಿದ್ದೇನೆ.

ಈಗ ಕೊಡಗು ರಾಜ್ಯ ಮುಕ್ತಿ ಮೋರ್ಚಾ ಹೋರಾಟವು ಬಂದ್‌ಗೆ ತಿರುಗಿರುವುದು ನನ್ನ ಮನಸ್ಸಿನಲ್ಲಿ ಭಯ ಉಂಟಾಗಿದೆ. ಕಾರಣವೇನೆಂದರೆ, ಕರ್ನಾಟಕ ರಾಜ್ಯದಲ್ಲಿ ಎಲ್ಲಿಯಾದರೂ ಶಾಂತಿ ಸಹಬಾಳ್ವೆಗಾಗಿ ಹೆಸರಾಗಿದ್ದರೆ ಅದು ಕೊಡಗು ಜಿಲ್ಲೆ ಎಂಬ ವಿಷಯ ಎಲ್ಲರಿಗೂ ತಿಳಿದ ವಿಷಯ. ಹಾಗೂ ಹೆಮ್ಮೆಯ ವಿಷಯವಾಗಿದೆ. "ಕೊಡಗು" ಎಂದ ಕ್ಷಣ ಅದೊಂದು ಪ್ರಕೃತಿ ಸೌಂದರ್ಯದ ಬೀಡು ಸಜ್ಜನರ ತಾಣವೆಂಬ ಭಾವನೆ ಕೊಡಗಿನಿಂದ ಹೊರಗಿರುವ ಜನರಲ್ಲಿ ಇದೆ. ಕೊಡಗಿನವರ ವಿಷಯದಲ್ಲಿ ಗೌರವ ಇದೆ. ಹಾಗಿರುವಾಗ ಶ್ರೀ ನಾಚಪ್ಪನವರಿಗೆ ಈ ರೀತಿಯ ಒಂದು ಅಭಿಪ್ರಾಯ ಯಾಕೆ ಬಂತು? ಇದರಿಂದ ಕೊಡಗಿನವರಿಗೆ ಪ್ರಯೋಜನವಿದೆಯೋ, ತೊಂದರೆ ಇದೆಯೋ ಎಂಬ ವಿಷಯವನ್ನು ನನ್ನ ಅಭಿಪ್ರಾಯವನ್ನು ಶ್ರೀ ನಾಚಪ್ಪನವರಿಗೆ ಈ ಪತ್ರಿಕೆಯ ಮುಖಾಂತರ ತಿಳಿಸುತ್ತಿದ್ದೇನೆ.

ಭಾರತದ ಸಂಸ್ಕೃತಿ ವಿಭಿನ್ನ ಭಾಷೆ, ಆಚರಣೆ, ವೈವಿಧ್ಯತೆಯಿಂದ ಇದ್ದರೂ ಏಕತೆಯಿಂದ ಕೂಡಿದೆ. ಅದೇ ರೀತಿ ಕರ್ನಾಟಕ ರಾಜ್ಯದಲ್ಲಿ ಇದೆ. ಹಾಗೇನೆ ಕೊಡಗು ಜಿಲ್ಲೆಯಲ್ಲೂ ಇದೆ. ನಮ್ಮ ಪಂಗಡಗಳ ಸಂಸ್ಕೃತಿ ವಿಭಿನ್ನವಾದರೂ ನಾವೆಲ್ಲಾ ಭಾರತಿಯರೇ.

ಈಗ ಕೊಡಗು ಜಿಲ್ಲೆಯ ಭಾಷೆ ಸಂಖ್ಯೆಯನ್ನು ತೆಗೆದು ಕೊಳ್ಳೋಣ. ಕೊಡಗಿನ ಜನ ಸಂಖ್ಯೆ ಐದು ಲಕ್ಷ. ಇದರಲ್ಲಿ ಕೊಡವ ಭಾಷೆ ಅರೆ ಕನ್ನಡ, ಕೊಡವ, ಹಿಂದೂಸ್ಥಾನಿ, ಮಲೆಯಾಳಂ, ತಮಿಳು, ತೆಲಗು, ತುಳು, ಕೊಂಕಣೆ, ಬ್ಯಾರಿ ಭಾಷೆ ಮಾತಾಡುವವರೂ ಇದ್ದಾರೆ. ಇವರುಗಳ ಸಂಸ್ಕೃತಿ ಭಿನ್ನ ಭಿನ್ನವಾಗಿದೆ. ಆದರೂ ಇವರೆಲ್ಲಾ ಕೊಡಗಿನವರೇ. ಕೆಲವು ಸಲ ಸಣ್ಣಪುಟ್ಟ ಘಟನೆಗಳನ್ನು ಬಿಟ್ಟರೆ ಕೊಡಗು ಶಾಂತಿಪ್ರಿಯವಾಗಿದೆ.

"ಕೊಡಗು" ಎಂಬ ಶಬ್ದಕ್ಕೆ ಹಲವಾರು ಅರ್ಥಗಳನ್ನು ಹಲವಾರು ಚರಿತ್ರೆಕಾರರು ಹೇಳುತ್ತಾರೆ. ಕೊಡಗು ರಾಜ್ಯವೆಂಬುದು ಮಾತ್ರ 1600ರಲ್ಲಿ ಹಾವೇರಿ ವಂಶದ ರಾಜನಾದ ವೀರರಾಜ ಈಗಿನ ಹಟ್ಟಿ ಹೊಳೆಯಿಂದ ದಕ್ಷಿಣಕ್ಕೆ ಇರುವ ರಾಜ್ಯವನ್ನು ಈ ಪ್ರಾಂತ್ಯಗಳಲ್ಲಿ ಆಳುತ್ತಿದ್ದ ನಾಯಕರುಗಳನ್ನು ಸೋಲಿಸಿ ಕೊಡಗು ರಾಜ್ಯವನ್ನು ಸ್ಥಾಪಿಸಿದನೆಂದು ಚರಿತ್ರೆ ಹೇಳುತ್ತದೆ.

ಹಾಲೇರಿ ಸಂಸ್ಥಾನ ಸ್ಥಾಪನೆಯಾಗುವ ಮೊದಲು ಈಗ ಹಾಲಿ ಇರುವ ಕೊಡಗು ಒಂದು ರಾಜ್ಯವಾಗಿರಲಿಲ್ಲ. ದಕ್ಷಿಣ ಮತ್ತು ಪಶ್ಚಿಮದ ಪ್ರದೇಶಗಳ ನಾಯಕರುಗಳ ಸ್ವಾಧೀನವಿದ್ದು ಅದು ಒಬ್ಬರಿಗೊಬ್ಬರು ಕಚ್ಚಾಡಿಕೊಂಡು ಈ ಪ್ರದೇಶಗಳಲ್ಲಿ ಶಾಂತಿ ಇಲ್ಲದೆ ಆಗಿನ ಕಾಲದಲ್ಲಿ ಜನರು ತುಂಬಾ ತೊಂದರೆಗೀಡಾಗಿದ್ದರು. ಈಗಿನ ಕೊಡಗಿನ ಪೂರ್ವ ಪ್ರದೇಶವಾದ ಕುಶಾಲನಗರ ಹೋಬಳಿ, ವೀರರಾಜ ಕ್ರಿ. ಶ. 1600ರಲ್ಲಿ ಕೊಡಗನ್ನು ಆಳುವುದಕ್ಕೆ ಮೊದಲು ಆ ಪ್ರದೇಶವು ಪೆರಿಯಪಟ್ಟಣದ ರಾಜರ ಅಧೀನದಲ್ಲಿತ್ತು. ಈಗಿನ ಸೋಮವಾರಪೇಟೆಯ ಹಟ್ಟಿ ಹೊಳೆಯಿಂದ ಹಿಡಿದು ಕೊಡಲಿಪೇಟೆಯವರೆಗಿನ ಪ್ರದೇಶವು ಏಳು ಸಾವಿರ ಸೀಮೆ ಎಂಬುದಾಗಿ ಹೆಸರಿದ್ದು, ಬಹಳ ಹಿಂದೆ ಕದಂಬರು ನಂತರ ಹೊಯ್ಸಳರು, ನಂತರ ವಿಜಯನಗರದ ಅರಸರ ಅಧೀನದಲ್ಲಿ 1565 ರವರೆಗೆ ಇತ್ತು. ಈ ಹಿನ್ನೆಲೆಯಲ್ಲಿ ನೋಡಿದಾಗ ಇಕ್ಕೇರಿಯಿಂದ ಬಂದ ಹಾಲೇರಿ ವಂಶದ ಮೂಲ ಪುರುಷರಾದ ವೀರರಾಜರಿಂದ ಕೊಡಗು ರಾಜ್ಯ ಸ್ಥಾಪನೆಯಾಯಿತೆಂದರೆ ತಪ್ಪಾಗದು. ಹಾಲೇರಿ ವಂಶದ ರಾಜರು ನಿಜವಾಗಿಯೂ ಕೊಡಗಿನಲ್ಲಿ ಒಗ್ಗಟ್ಟನ್ನು ಸ್ಥಿರ ವಾಗಿರಿಸಲು ಸಹಾಯಕರಾಗಿದ್ದಾರೆ. ಆ ಕಾಲದಲ್ಲಿ ಕೊಡಗಿನಲ್ಲಿ ನೆಲೆಸಿದ್ದವರ ಪದ್ಧತಿಗಳನ್ನು ಕ್ರೋಢಿಕರಿಸಿ ಅವರ ಸಂಸ್ಕೃತಿಯನ್ನು ಪ್ರೋತ್ಸಾಹಿಸಿದ್ದಾರೆ. ಲಿಂಗರಾಜೇಂದ್ರ ಒಡೆಯರು 54 ಹುಕುಂ ನಾಮೆಯನ್ನು ಹೊರಡಿಸಿ ಸಾಂಸ್ಕೃತಿಕ ಹಾಗೂ ಆರ್ಥಿಕ ವಿಷಯಗಳಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ಹುಕುಂ ಕೊಟ್ಟಿದ್ದರಿಂದ ಕೊಡಗಿನಲ್ಲಿ ಈ ಹುಕುಂಗಳು ಸಾಮಾನ್ಯವಾಗಿ ಕೊಡವರಲ್ಲದೆ ಕೊಡಗಿನ ಎಲ್ಲಾ ಜಾತಿಯವರೂ ಹಾಗೂ ಮತಸ್ಥರು ಹುತ್ತರಿ ಹಾಗೂ ಕಾವೇರಿ ಸಂಕ್ರಮಣ ಹಬ್ಬವನ್ನು ನಾಡ ಹಬ್ಬವಾಗಿ ಆಚರಿಸಲು ಪ್ರಾರಂಭಿಸಿದರು. ಕಾವೇರಿ ಸಂಕ್ರಮಣದಲ್ಲಿ ಗದ್ದೆ ತೋಟಗಳಿಗೆ 'ಬೆತ್ತು' ಕುತ್ತುವುದು ಹಾಗೂ ಹುತ್ತರಿಯಲ್ಲಿ ಕದಿರು ಕಟ್ಟುವುದು ಪ್ರತಿ ವ್ಯವಸಾಯಗಾರನು ಮಾಡುತ್ತಾನೆ. ಇದಕ್ಕೆ ಜಾತಿ ಮತ ಭೇದವಿಲ್ಲ.

ದೊಡ್ಡ ವೀರರಾಜ ವಡೆಯರಂತೂ ಟಿಪ್ಪು ಸುಲ್ತಾನನು ಹಿಡಿದುಕೊಂಡಿದ್ದ ಕೊಡಗನ್ನು ಕಷ್ಟಪಟ್ಟು ಹಿಂದಕ್ಕೆ ವಶಪಡಿಸಿ ಕೊಂಡು ಕೊಡಗಿನ ಹೆಸರನ್ನು ಉಳಿಸಿದನು. ಒಂದು ವೇಳೆ ಹಾಲೇರಿ ವಂಶದ ರಾಜರು ಕೊಡಗನ್ನು ಆಳದಿದ್ದಲ್ಲಿ ಹಟ್ಟಿ ಹೊಳೆಯಿಂದ ಹಿಡಿದು ಇರ್ಪಿನವರೆಗಿದ್ದ ಪ್ರದೇಶ ಒಂದಲ್ಲ ಒಂದು ರೀತಿಯಿಂದ ಮಲೆಯಾಳ ಮತ್ತು ತಮಿಳು ರಾಜ್ಯಭಾರಕ್ಕೆ ಒಳಪಟ್ಟಿದ್ದು ಅದು ಹಾಗೆಯೇ ಮುಂದುವರಿದು, ಈ ಪ್ರದೇಶ ಕೇರಳಕ್ಕೆ ಸೇರಿ ಹೋಗುತ್ತಿತ್ತೇನೋ. ಕಾರಣವೇನೆಂದರೆ 1600ಕ್ಕಿಂತ ಹಿಂದೆ ಇದ್ದ ಕೊಡಗಿನ ನಾಯಕರಿಗೆ ಕೊಡಗಿನ ಎಲ್ಲಾ ಪ್ರದೇಶಗಳನ್ನು ಗೆದ್ದು ರಾಜ್ಯ ಭಾರ ಮಾಡುವಷ್ಟು ತಾಕತ್ತು ಇರಲಿಲ್ಲ. ಉದಾಹರಣೆಗೆ ಪಾಲೂರು ದೇವಸ್ಥಾನ ಮತ್ತು ಭಾಗಮಂಡಲದ ಭಗಂಡೇಶ್ವರ ದೇವಸ್ಥಾನದ ಶಿಲಾಶಾಸನವೇ ಸಾಕ್ಷಿ. ಇವರೆಡು ಶಾಸನಗಳಲ್ಲಿ ಕೊಡಗಿನ ಪಶ್ಚಿಮ ಭಾಗ, 1321ರಲ್ಲಿ ಉತ್ತರ ಮಲಬಾರಿನ ಮಂಡಲಿಕ ಬೋದರೂಪ ಈ ಕೊಡಗಿನ ಪಶ್ಚಿಮ ಭಾಗಗಳನ್ನು ಆಳುತ್ತಿದ್ದನೆಂದು ಕಂಡು ಬರುತ್ತದೆ. ನಂತರ ಕರ್ಣಂಬು ಬಾಹು ಎಂಬ ನಾಯಕನು ಆಳುತ್ತಿದ್ದನೆಂದು ಚರಿತ್ರೆಯಲ್ಲಿ ನಮೂದಿಸಿದೆ. ಅಲ್ಲದೆ ಚೋಳರಾಜನಾದ ರಾಜ ರಾಜೇಂದ್ರ ಚೋಳನ ರಾಜ್ಯವು ಭಾಗ ಮಂಡಲದವರೆಗೆ ಹಬ್ಬಿತ್ತು ಎಂದು ಚರಿತ್ರೆಯಲ್ಲಿ ಉಲ್ಲೇಖ ವಿರುವುದರಿಂದ 1600ರವರೆಗೆ ಕೊಡಗು ರಾಜ್ಯವೆಂಬುದಾಗಿ ಇತ್ತಿಲ್ಲವೆಂಬುದು ದೃಢಪಡುತ್ತದೆ. ಕೊಡಗು ಮುದ್ದುರಾಜರ ದೊಡ್ಡವೀರಪ್ಪ ರಾಜ ಒಂದನೇ ಲಿಂಗರಾಜರ ಕಾಲದಲ್ಲಿ ಈಗಿನ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯದಿಂದ ಹಿಡಿದು ಪಾಣೆ ಮಂಗಳೂರು, ಬೆಳ್ತಂಗಡಿ, ಸುಬ್ರಮಣ್ಯದವರೆಗೆ ಪಶ್ಚಿಮದಲ್ಲಿ ವಿಸ್ತರಿಸಿದ್ದು, ಪೂರ್ವಭಾಗದಲ್ಲಿ



ಪೆರಿಯಾಪಟ್ಟಣ ಅರಕಲಗೂಡು ಉತ್ತರದಲ್ಲಿ ಸಕಲೇಶಪುರದವರೆಗೆ ವಿಸ್ತರಿಸಿತ್ತು. 1834ರಲ್ಲಿ ಬ್ರಿಟಿಷರು ಕೊಡಗನ್ನು ವಶಪಡಿಸಿಕೊಂಡಾಗ ಸುಳ್ಯದಿಂದ ಪಾಣೆ, ಮಂಗಳೂರಿನವರೆಗಿನ ಕೆಳಗಿನ ಕೊಡಗನ್ನು ಮೇಲಿನ ಕೊಡಗಿನಿಂದ ಬೇರ್ಪಡಿಸಿ ದಕ್ಷಿಣ ಕನ್ನಡ ಜಿಲ್ಲೆ ಎಂದು ಕರೆದು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಿದರು. ಸಕಲೇಶಪುರ, ಅರಕಲಗೂಡು ಮತ್ತು ಪೆರಿಯಾ ಪಟ್ಟಣ, ಮೈಸೂರಿಗೆ ಬಿಟ್ಟು ಕೊಟ್ಟರು. ಪರಿಸ್ಥಿತಿ ಹೀಗಿರುವಾಗ ಶ್ರೀ ನಾಚಪ್ಪನವರು ಹೋರಾಡುತ್ತಿರುವ ಕೊಡಗು 1600ರಲ್ಲಿ ಇದ್ದ ಕೊಡಗು ರಾಜ್ಯವೋ? ಅಥವಾ 1600ರ ನಂತರ 1834ರ ವರೆಗೆ ಇದ್ದ ಕೊಡಗೇ? ಅಥವಾ 1834ರ ನಂತರ ಇರುವ ಕೊಡಗು ಪ್ರದೇಶವೋ? ಗೊತ್ತಾಗುತ್ತಿಲ್ಲ.

1834 ರಿಂದೀಚೆಗೆ ಇರುವ ಕೊಡಗು ಎಂದಾದರೆ ಆ ರಾಜ್ಯ ಸ್ಥಾಪನೆಯಿಂದ ಆಗಬಹುದಾದ ಲಾಭ ನಷ್ಟಗಳನ್ನು ಈಗ ನಾವು ಒಂದೊಂದಾಗಿ ವಿಶ್ಲೇಷಿಸೋಣ.

ಈಗಿರುವ ಕೊಡಗು ಜಿಲ್ಲೆ 1947ರ ವರೆಗೆ ಬ್ರಿಟಿಷರ ಆಡಳಿತದಲ್ಲಿದ್ದಾಗ ಕೊಡಗಿನಲ್ಲಿ ಡಾಮರ್ ಮಾಡಿದ ರಸ್ತೆಗಳು ಮಡಿಕೇರಿಯಿಂದ ಮೈಸೂರಿಗೆ, ಮಡಿಕೇರಿಯಿಂದ ಮಂಗಳೂರಿಗೆ, ಮಡಿಕೇರಿಯಿಂದ ಸಿದ್ದಾಪುರಕ್ಕಾಗಿ ವಿರಾಜಪೇಟೆಗೆ, ಮಡಿಕೇರಿಯಿಂದ ಸೋಮವಾರಪೇಟೆಗಾಗಿ ಹಾಸನಕ್ಕೆ ಮಾತ್ರ ಆಗಿತ್ತು. 1947ರಿಂದ 1956ರವರೆಗೆ ಮಡಿಕೇರಿ, ಮೂರ್ನಾಡು, ವಿರಾಜಪೇಟೆ, ಮಡಿಕೇರಿ, ಭಾಗಮಂಡಲ, ಮಡಿಕೇರಿ, ನಾಪೋಕ್ಲು ರಸ್ತೆಗಳು ಡಾಮಾರೀಕರಣ ಆಗಿದ್ದವು. 1956 ರಿಂದ ಅಂದರೆ ಕೊಡಗು ಮೈಸೂರಿಗೆ ಸೇರಿ ಇಂದಿನವರೆಗೆ ಕೊಡಗಿನ ಎಲ್ಲಾ ನಾಡಿನ ಮುಖ್ಯ ಪಟ್ಟಣಗಳಿಗೆ ಪ್ರತಿ ಗ್ರಾಮಗಳಿಗೆ ಹೊಸ ರಸ್ತೆಗಳನ್ನು ನಿರ್ಮಿಸಿ ಡಾಮರೀಕರಣ ಮುಂದುವರಿಯುತ್ತಾ ಇದೆ. 1947 ಕ್ಕಿಂತ ಹಿಂದೆ ಕಾವೇರಿ ನದಿಗೆ ಅಡ್ಡಲಾಗಿ ಸಿದ್ದಾಪುರ ಹಾಗೂ ಕುಶಾಲನಗರದ ಹತ್ತಿರ ಸೇತುವೆ ನಿರ್ಮಾಣ ಹೊರತು, ಬೇರೆ ಯಾವ ಕಡೆಯಲ್ಲಿ ಸೇತುವೆಗಳಾಗಿರಲಿಲ್ಲ. 1947 ರಿಂದ 1956ರವರೆಗೆ ಕೊಡಗು "C" ರಾಜ್ಯವಾಗಿದ್ದಾಗ ಕಾವೇರಿ ನದಿಗೆ ಬೇತರಿಯಲ್ಲಿ ಮಾತ್ರ ಸೇತುವೆ ನಿರ್ಮಾಣ ಆಯಿತು. ಪೆರಾಜೆ, ಪಯಸ್ವಿನಿ ನದಿಗೆ ಸೇತುವೆ ಆಯಿತು. 1956ರಿಂದೀಚೆಗೆ ಕಾವೇರಿನದಿಗೆ ಬಲಮುರಿಯ ಕೊಂಡಗೇರಿಯಲ್ಲಿ, ಕೊಟ್ಟ ಮುಡಿಯಲ್ಲಿ ಸೇತುವೆಗಳಾದವು. ಮರೆನಾಡಿನ ಬರಪೊಳೆ, ಹಾರಂಗಿ ಹೊಳೆ ಎತ್ತುಕಡು ಸೇತುವೆಗಳಲ್ಲದೆ ಗ್ರಾಮಗಳ ಸಣ್ಣ ಸಣ್ಣ ಹೊಳೆಗಳಿಗೆ ಸೇತುವೆ ನಿರ್ಮಾಣವಾಯಿತು. ರಸ್ತೆ ನಿರ್ಮಾಣ, ಸೂರ್ಲಬಿ, ಹಮ್ಮಾಲ, ಪುಷ್ಪಗಿರಿ, ತಲಕಾವೇರಿ, ಭಾಗಮಂಡಲ, ನೆಲಜಿ, ನಾಪೋಕ್ಲು, ಚೆಯ್ಯಂಡಾಣೆ, ಪಾರಾಣೆ, ಮುಕ್ಕೊಡ್ಲು ರಸ್ತೆ, ಮುರ್ಕಲ್ಲು ರಸ್ತೆ, ಕರಿಕೆ ರಸ್ತೆ, ಗಾಳಿಬೀಡು ರಸ್ತೆ, ಮರಗೋಡು ಸಿದ್ದಾಪುರ ರಸ್ತೆ, ನಿರ್ಮಾಣವಾದುದರಿಂದ ಹಿಂದೆ ಅಂದರೆ, 1956ಗಿಂತ ಹಿಂದೆ ಗ್ರಾಮಗಳಿಂದ ಪೇಟೆಗಳಿಗೆ ತಲೆಹೊರೆಯಲ್ಲಿ ಅಥವಾ ಕುದುರೆಗಳಲ್ಲಿ ಸಾಮಾನುಗಳನ್ನು ಸಾಗಿಸುವ ಬದಲು ಗ್ರಾಮ ಗ್ರಾಮಗಳ ರಸ್ತೆ ನಿರ್ಮಾಣದಿಂದಾಗಿ ಈಗ ಜೀಪ್, ಲಾರಿಗಳಲ್ಲಿ ಸಾಗಿಸುವಂತಾಗಿದೆ. ಬಸ್ ಓಡಾಟವೂ ಹೆಚ್ಚಿನ ರೀತಿಯಲ್ಲಿ ಆಗಿ ಜನರು ಕಾಲು ನಡಿಗೆಯಲ್ಲಿ ನಡೆಯುವ ಪ್ರಯಾಸ ಕಡಿಮೆಯಾಗಿದೆ. ತಾವು ಬೆಳೆಸಿದ ವಸ್ತುಗಳನ್ನು ಸಾಗಿಸಲು ರೈತರಿಗೆ ಬೇಕಾದ ಎಲ್ಲ ಸರಕುಗಳನ್ನು ಈಗ ಯಾವ ತೊಂದರೆ ಇಲ್ಲದೆ ಸಾಗಾಣಿಕೆ ಮಾಡಬಹುದು.

ಅಂಡಮಾನ್ ದ್ವೀಪದಂತೆ ಇದ್ದ ಮರೆನಾಡು, ಕರಿಕೆ, ಮುಂಡ್ರೋಟು, ಅವಂದೂರು, ಬೆಟ್ಟತ್ತೂರು, ಗರ್ವಾಲೆ, ಹಮ್ಮಾಲ; ಸೂರ್ಲಭಿ, ಕಂತಿ, ಕುಂದಳ್ಳಿಗಳಿಗೆ ಹೊರ ಪ್ರಪಂಚಕ್ಕೆ ಸಂಪರ್ಕ ಕಲ್ಪಿಸಿಕೊಟ್ಟಿದ್ದು ಸರಿಯಷ್ಟೆ.

**ವಿದ್ಯಾಭ್ಯಾಸ :**

1947 ರವರೆಗೆ ಕೊಡಗಿನಲ್ಲಿ ಮಡಿಕೇರಿ, ವೀರಾಜಪೇಟೆ, ಪೊನ್ನಂಪೇಟೆ ಹಾಗೂ ನಾಪೋಕ್ಲು ಮತ್ತು ಸೋಮವಾರಪೇಟೆಗಳಲ್ಲಿ ಮಾತ್ರ ಹೈಸ್ಕೂಲುಗಳಿದ್ದು ಒಂದಾದರೂ ಕಾಲೇಜು ಸಹ ಇಲ್ಲದೆ ಇದ್ದ ಪರಿಸ್ಥಿತಿ ಇತ್ತು. ಕಾಲೇಜು ವಿದ್ಯಾಭ್ಯಾಸಕ್ಕೆ ಮಂಗಳೂರು, ಮೈಸೂರು, ಬೆಂಗಳೂರು ಅಥವಾ ಮದ್ರಾಸು ಮುಂಬೈಗಳಿಗೆ ಹೋಗಬೇಕಾಗಿತ್ತು. 1947ರಿಂದ 1956ರವರೆಗೆ ಹುದಿಕೇರಿ, ಕುಶಾಲನಗರ, ಮಾದಾಪುರ, ಶ್ರೀಮಂಗಲಗಳಲ್ಲಿ ಹೈಸ್ಕೂಲುಗಳು ತೆರೆಯಲ್ಪಟ್ಟು, ಮಡಿಕೇರಿಯಲ್ಲೊಂದು ಕಾಲೇಜು ಪ್ರಥಮ ಬಾರಿಗೆ ತೆರೆಯಲ್ಪಟ್ಟಿತು.

1956ರ ನಂತರ ಕೊಡಗು ಕರ್ನಾಟಕ್ಕೆ ಸೇರಿದ ನಂತರ ವೀರಾಜಪೇಟೆ, ಸೋಮವಾರಪೇಟೆ, ಕುಶಾಲನಗರ, ಗೋಣಿಕೊಪ್ಪಲು, ಭಾಗಮಂಡಲದಲ್ಲಿ ಪ್ರಥಮ ದರ್ಜೆ ಕಾಲೇಜುಗಳು ಸ್ಥಾಪಿಸಲ್ಪಟ್ಟಿವೆ. ಗ್ರಾಮಾಂತರ ಪ್ರದೇಶಗಳಲ್ಲಿ 4-5ಗ್ರಾಮಗಳಿಗೊಂದು ಹೈಸ್ಕೂಲ್ 2-3 ಗ್ರಾಮಗಳಿಗೊಂದು ಮಾಧ್ಯಮಿಕ ಶಾಲೆ ಪ್ರತಿ ಗ್ರಾಮದಲ್ಲು ಪ್ರಾಥಮಿಕ ಶಾಲೆ 5-6 ಗ್ರಾಮಗಳಿಗೊಂದು ಪದವಿ ಪೂರ್ವ ಕಾಲೇಜುಗಳು, ಹಲವಾರು ಟಿ.ಸಿ.ಹೆಚ್. ಕಾಲೇಜುಗಳು ಸ್ಥಾಪಿಸಲ್ಪಟ್ಟಿವೆ ಇವುಗಳಲ್ಲದೆ ಪ್ರತಿ ಗ್ರಾಮಕ್ಕೊಂದು ಅಂಗನವಾಡಿಗಳನ್ನು ತೆರೆದು ಚಿಕ್ಕ ಹಸುಳೆಗಳೂ ಮನೆಯಲ್ಲಿ ಯಾವುದೇ ಚಟುವಟಿಕೆಗಳಿಲ್ಲದೆ ಕಾಲಹರಣ ಮಾಡುವುದನ್ನು ತಪ್ಪಿಸಿ ವಿದ್ಯಾಭ್ಯಾಸದ ಕಡೆಗೆ ಮನಸ್ಸನ್ನು ತಿರುಗಿಸುವ ಏರ್ಪಾಡು ಮಾಡಲಾಗಿದೆ. ಇವೆಲ್ಲಾ ಪ್ರಗತಿಯಲ್ಲವೇ? ಇವಕ್ಕೆಲ್ಲಾ ಸರ್ಕಾರ ಹಣ ವ್ಯಯ ಮಾಡುವುದಿಲ್ಲವೇ?

**ವಿದ್ಯುಚ್ಛಕ್ತಿ :**

೧೯೫೭ರವರೆಗೆ ಕೊಡಗಿನ ಮಡಿಕೇರಿಯಲ್ಲಿ ಸಂಜೆ 6 ಗಂಟೆಯಿಂದ ರಾತ್ರಿ 10 ಗಂಟೆಯವರೆಗೆ ಡೈನಮೋ ಉಪಯೋಗಿಸಿ ವಿದ್ಯುಚ್ಛಕ್ತಿ ಸರಬರಾಜು ಮಾಡಲಾಗುತ್ತಿತ್ತು. ಬೇರೆ ಯಾವ ಪಟ್ಟಣಗಳಿಗಾಗಲೀ ವಿದ್ಯುಚ್ಛಕ್ತಿಯ ಸರಬರಾಜು ಇತ್ತಿಲ್ಲ. ಆದರೆ ಕೊಡಗು ಕರ್ನಾಟಕದೊಡನೆ ವಿಲೀನವಾದ ನಂತರ ಕೊಡಗಿನ ಎಲ್ಲಾ ಪಟ್ಟಣಗಳಿಗೂ ಎಲ್ಲಾ ಹಳ್ಳಿಗಳಿಗೂ ವಿದ್ಯುಚ್ಛಕ್ತಿ ಬಂದಿದೆ. ಈಗ ಜಿಲ್ಲೆಯ ಎಲ್ಲೆಡೆ ವಿದ್ಯುಚ್ಛಕ್ತಿ ಅಳವಡಿಕೆ ಸರ್ಕಾರದಿಂದ ಖರ್ಚಾಗುವ ಹಣವಲ್ಲದೆ, ಕಾಫಿ ಹಣವೇ?

**ಕುಡಿಯುವ ನೀರಿನ ಸೌಕರ್ಯ :**

1956ರವರೆಗೆ ಕೊಡಗಿನ ಮುನಿಸಿಪಾಲಿಟಿಗಳಲ್ಲಿ ಹೊರತು ಚಿಕ್ಕ ಚಿಕ್ಕ ಪಟ್ಟಣಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಯಾವ ರೀತಿಯ ಕುಡಿಯುವ ನೀರಿಯ ಸೌಕರ್ಯ ಇತ್ತಿಲ್ಲ. ಈಗ ಚಿಕ್ಕಪಟ್ಟಣಗಳಾದ ಶ್ರೀಮಂಗಲ, ಮಡಿಕೇರಿ,



ಬಾಳಲೆ, ಸಿದ್ದಾಪುರ, ಅಮ್ಮತ್ತಿ, ಮೂರ್ನಾಡು, ಭಾಗಮಂಡಲ, ಶನಿವಾರಸಂತೆ, ಕೊಡ್ಲಿಪೇಟೆ, ನಾಪೋಕ್ಲು ಮುಂತಾದ ಸ್ಥಳಗಳಲ್ಲದೆ ಪ್ರತಿ ಗ್ರಾಮಕ್ಕೆ ಬೋರ್‌ವೆಲ್ ಅಥವಾ ಇನ್ನಾವುದೇ ರೀತಿಯ ಸೌಕರ್ಯವನ್ನು ಮಾಡಿಸಿದ್ದಾರೆ. ಗುಂಪು ಮನೆಗಳು ಇರುವಲ್ಲಿ ಎಲ್ಲಾ ಕಡೆ ಬೋರ್‌ವೆಲ್‌ಗಳನ್ನು ತೆಗೆಸಿದ್ದಾರೆ. ಇದೆಲ್ಲಾ ಸರ್ಕಾರದ ಹಣವಲ್ಲವೇ? ಕೊಡಗು ಪ್ರತ್ಯೇಕವಿದ್ದಾಗ ಆಗಿದ್ದ ಕೆಲಸ ಕಾರ್ಯಗಳಿಗಿಂತಲೂ ಎಷ್ಟೋ ಪಟ್ಟು ಹೆಚ್ಚಿನ ಕೆಲಸ ಕಾರ್ಯಗಳು ನಂತರ ಆಗಿಲ್ಲವೆ?

**ನೀರಾವರಿ :**

ನೀರಾವರಿ ಬಾಪತ್ತಿನಲ್ಲಿ ಸಣ್ಣ ಸಣ್ಣ ನದಿಗಳಿಗೆ ಸಾಧ್ಯವಾದಲೆಲ್ಲ ಅಣೆಕಟ್ಟುಗಳು, ಕೆರೆಗಳ ದುರಸ್ತಿಗಳನ್ನು ಮಾಡಲು ಬೇಕಾದಷ್ಟು ಹಣ ಖರ್ಚಾಗಿದೆ. ಇದೆಲ್ಲಾ ಕರ್ನಾಟಕ ಸರ್ಕಾರದ ಹಣವಲ್ಲವೇ?

**ಉದ್ಯೋಗವಕಾಶ :**

ಕೊಡಗು ಸರ್ಕಾರವಿದ್ದಾಗ ಪ್ರತಿ ಇಲಾಖೆಯ ಮುಖ್ಯಸ್ಥರು ಗೆಜೆಟೆಡ್ ಅಧಿಕಾರಿಗಳಾಗಿದ್ದರು. ಆದರೆ ಅಂದು ಇದ್ದ ಅಧಿಕಾರಿಗಳು ನಿವೃತ್ತರಾದ ಮೇಲೆ ಮಾತ್ರ ಅವರ ಕೆಳಗಿನವರಿಗೆ ಬಡ್ತಿ ಸಿಗುತ್ತಿತ್ತು. ಒಂದೊಂದು ಇಲಾಖೆಯಲ್ಲಿ ಒಬ್ಬೊಬ್ಬರಿಗೆ ಮಾತ್ರ ಅವಕಾಶ ಇತ್ತು. ಈಗ ಹಾಗಲ್ಲ, ರಾಜ್ಯ ವಿಸ್ತಾರವಾಗಿರುವುದರಿಂದ ಕೆಲವರು ನಿವೃತ್ತಿಯಾಗುತ್ತಾರೆ. ಕೆಲವರಿಗೆ ಬಡ್ತಿ ಸಿಗುತ್ತದೆ. ಶಾಲಾ ಕಟ್ಟಡಗಳಿಗೆ ಸಹ ತಾಲ್ಲೂಕು ಬೋರ್ಡು ಗ್ರಾಮ ಪಂಚಾಯಿತಿಯ ಮುಖಾಂತರ ಬೇಕಾದಷ್ಟು ಹಣ ಖರ್ಚಾಗಿದೆ. 1956ಕ್ಕಿಂತ ಮೊದಲಿದ್ದ ಸ್ಥಿತಿಗೂ ತದ ನಂತರ ಆದ ಕೆಲಸ ಕಾರ್ಯಗಳಿಗೂ ತುಂಬಾ ಅಜಗಜಾಂತರ ವ್ಯತ್ಯಾಸವಿದೆ. ಇದಕ್ಕೆಲ್ಲಾ ಕರ್ನಾಟಕ ಸರ್ಕಾರ ಹಣ ಖರ್ಚು ಮಾಡಲಿಲ್ಲವೇ? ಪ್ರತಿಯೊಂದು ಇಲಾಖೆಗಳಲ್ಲೂ ಇದೇ ರೀತಿ ಕಟ್ಟಡ ಹಾಗೂ ಸೌಲಭ್ಯಗಳಿಗಾಗಿ ಹಣ ಖರ್ಚು ಮಾಡಿದೆ. ಗ್ರಾಮಾಂತರ ಆರೋಗ್ಯ ಕೇಂದ್ರಗಳು, ಸೂಲಗಿತ್ತಿ ವೈದ್ಯರುಗಳ ನೇಮಕ, ಆಸ್ಪತ್ರೆಗಳ ಹೆಚ್ಚಿಸುವಿಕೆ, ಹಿಂದೆ ಇದ್ದ ಆಸ್ಪತ್ರೆಗಳ ವೈದ್ಯರುಗಳ ಅಭಿವೃದ್ಧಿ ಕೆಲಸ ಭರದಿಂದ ಸಾಗಿದೆ.

**ಉದ್ಯೋಗ ಹೆಚ್ಚಿಸುವಿಕೆ :**

ಕೊಡಗು "C" ಪ್ರಾಂತ್ಯವಿದ್ದಾಗ ಚೀಫ್ ಕಮೀಷನರ್‌ರ ಕೆಳಗೆ ಅಸಿಸ್ಟೆಂಟ್ ಕಮೀಷನರ್, ಎರಡು ಸುಬೇದಾರರು (ತಹಶೀಲ್ದಾರರು) ಒಬ್ಬ ಡಿಸ್ಟ್ರಿಕ್ಟ್ ಮತ್ತು ಸೆಷನ್ ಜಡ್ಜ್, ಇಬ್ಬರು ಮುನಸೀಫ್, ಒಬ್ಬ ವೈದ್ಯಾಧಿಕಾರಿ (ಸರ್ಜನ್) ಒಬ್ಬ ಆರೋಗ್ಯಾಧಿಕಾರಿ, ಒಬ್ಬ ಸುಪರಿಟೆಂಡೆಂಟ್ ಆಫ್ ಪೊಲೀಸ್, ಎರಡು ಸರ್ಕಲ್ ಇನ್ಸ್‌ಪೆಕ್ಟರ್, ಒಬ್ಬ ಕನ್‌ಸರವೇಟರ್ ಆಫ್ ಫಾರೆಸ್ಟರ್, ಒಬ್ಬ ಡಿಸ್ಟ್ರಿಕ್ಟ್ ಫಾರೆಸ್ಟ್ ಆಫೀಸರ್, ಒಬ್ಬ ಜಿಲ್ಲಾ ವೈದ್ಯಾಧಿಕಾರಿ, ಆರು ಜನ ಹೈಸ್ಕೂಲೂ ಹೆಡ್ ಮಾಸ್ಟರುಗಳು, ಇವರುಗಳಲ್ಲದೆ ಇನ್ನೂ ಯಾರು ಗೆಜೆಟೆಡ್ ಆಫೀಸರುಗಳಿರಲಿಲ್ಲ. ಕೊಡಗಿನ ಯುವಕ ಯುವತಿಯರಿಗೆ, ಎಷ್ಟು ಜನಕ್ಕೆ ಈ ಉದ್ಯೋಗ ಲಭಿಸಬಲ್ಲದು? ಈಗಲಾದರೂ ಕೊಡಗಿನ ಯುವಕರು ಸಾಧಾರಣ ಇನ್ನೂರಿಂದ ಮುನ್ನೂರವರೆಗೆ ಸಬ್ ಇನ್ಸ್‌ಪೆಕ್ಟರುಗಳು 33-40 ಸರ್ಕಲ್ ಇನ್ಸ್‌ಪೆಕ್ಟರ್‌ಗಳು, 20-25 ಡೆಪ್ಯುಟಿ ಸೂಪರಿನ್‌ಟೆಂಡೆಂಟ್ ಆಫ್ ಪೊಲೀಸ್ ಇದ್ದಾರೆ. ಇವರಿಗೆಲ್ಲಾ 40-60 ಮೈಲು ವಿಸ್ತೀರ್ಣದ ಕೊಡಗಿನಲ್ಲಿ ಉದ್ಯೋಗ ಸಿಗುತ್ತಿತ್ತೇ? ನೀವೇ ಯೋಚಿಸಿ ಕೊಡಗಿನಲ್ಲಿ ಮೂರು ತಾಲ್ಲೂಕು ಇರುವುದರಿಂದ ಮೂರು ಜನ ಮಾತ್ರ ತಹಸೀಲ್ದಾರರು ಆಗಲು ಸಾಧ್ಯ. ಈಗ ಕೊಡಗಿನವರು ತಹಸೀಲ್ದಾರ್ ಪದವಿಯನ್ನು 30-40 ಜನರು ಪಡೆದಿದ್ದಾರೆ. ಐ.ಎ.ಎಸ್. ಐ.ಪಿ.ಎಸ್. ಆಫೀಸರುಗಳು ಕೊಡಗಿಗೆ ಒಬ್ಬರೇ ಇಬ್ಬರೇ ಬೇಕಾಗಬಹುದು. ಆದರೆ ಕೊಡಗಿನ ವಿದ್ಯಾವಂತರು ಸಹ ಐ.ಎ.ಎಸ್., ಐ.ಪಿ.ಎಸ್. ಅಸಿಸ್ಟೆಂಟು ಕಮೀಷನರ್, ಸ್ಪೆಷಲ್ ಡೆಪ್ಯುಟಿ ಕಮೀಷನರ್, ಹುದ್ದೆಯಲ್ಲಿ 25ಕ್ಕಿಂತ ಹೆಚ್ಚು ಜನರಿದ್ದಾರೆ. ಕೊಡಗು ಪ್ರತ್ಯೇಕ ರಾಜ್ಯ ಆಗಿದ್ದರೆ ಇವರಿಗೆಲ್ಲಾ ಎಲ್ಲಿಂದ ನೌಕರಿಯನ್ನು ಕೊಡಲಾಗುತ್ತಿತ್ತು. ಅದೇ ರೀತಿ ಡಾಕ್ಟರುಗಳು ಸಹ ಮೆಡಿಕಲ್ ಕಾಲೇಜಿನ ಪ್ರಿನ್ಸಿಪಾಲ್ ಹಾಗೂ ಡೈರೆಕ್ಟರ್ ಆಫ್ ಹೆಲ್ತ್ ಮುಂತಾದ ಹುದ್ದೆಗಳಲ್ಲಿ ಹಲವಾರು ಜನರಿದ್ದಾರೆ. ಇವರಿಗೆಲ್ಲಾ ಕೊಡಗಿನಲ್ಲಿ ಅವಕಾಶ ಸಿಗುತ್ತಿತ್ತೆ? ಇದೇ ರೀತಿ ಕಮರ್ಷಿಯಲ್ ಟ್ಯಾಕ್ಸಿನಲ್ಲಿ ಐ.ಎ.ಎಸ್. ಕೇಡರಿಗಿಂತ ಕೆಳಗಿನ ಕೇಡರಿನಲ್ಲಿ ಹಲವಾರು ಜನ ಕಮೀಷನರ್‌ಗಳಾಗಿ, ಅಸಿಸ್ಟೆಂಟ್ ಕಮೀಷನರಾಗಿ ಕೆಲಸ ಮಾಡುತ್ತಿದ್ದಾರೆ.

ಇನ್ನು ತಾಂತ್ರಿಕ ವಿದ್ಯಾಭ್ಯಾಸವನ್ನು ತೆಗೆದುಕೊಳ್ಳೋಣ. ಕರ್ನಾಟಕದಲ್ಲಿ ಮೆಡಿಕಲ್ ಕಾಲೇಜುಗಳು 16, ಡೆಂಟಲ್ ಕಾಲೇಜುಗಳು 13, ಇಂಜಿನಿಯರಿಂಗ್ ಕಾಲೇಜುಗಳು 50, ಇರುವುದರಿಂದ ಕೊಡಗಿನ ಯುವಕರಿಗೆ ಈ ಕಾಲೇಜುಗಳಲ್ಲಿ ಸೀಟು ಲಭಿಸುತ್ತಿತ್ತೆ? ಅವರೆಲ್ಲಾ ತಮ್ಮ ಜೀವನೋಪಾಯಕ್ಕಾಗಿ ಬೇರೆ ರಾಜ್ಯಗಳಲ್ಲಿ ಉದ್ಯೋಗವನ್ನು ಮಾಡಬೇಕಿತ್ತು. ವಿದ್ಯಾ ಇಲಾಖೆಯಲ್ಲಿ ಹಿಂದಿನ ಕೊಡಗು ರಾಜ್ಯದಲ್ಲಿ ಇದ್ದದ್ದು ಒಬ್ಬನೇ ಒಬ್ಬ ಡಿಸ್ಟ್ರಿಕ್ಟ್ ಎಜುಕೇಶನ್ ಆಫೀಸರ್, ಮತ್ತೆಲ್ಲಾ ಗೆಜೆಟೆಡ್ ಅಲ್ಲದ ಅಧಿಕಾರಿಗಳು, ಆದರೆ ಈಗ ಕೊಡಗಿನ ವಿದ್ಯಾವಂತರು ವಿದ್ಯಾ ಇಲಾಖೆಯ ಅತ್ಯುನ್ನತ ಪದವಿಯಾಗಿರುವ ಡೈರೆಕ್ಟರ್, ಜಾಯಿಂಟ್ ಡೈರೆಕ್ಟರ್, ಡೆಪ್ಯುಟಿ ಡೈರೆಕ್ಟರಾಗಿ 8 -10 ಜನ ಈಗಲೂ ಸೇವೆ ಸಲ್ಲಿಸುತ್ತಿದ್ದಾರೆ. ಅದೇ ರೀತಿ ಇಂಜಿನಿಯರಿಂಗ್ ಮೆಡಿಕಲ್ ಪದವಿ ಗಳಿಸಿದವರೂ ಸಹ ಆಗಿನ ಕೊಡಗು ರಾಜ್ಯದಲ್ಲಿ ಇದ್ದದ್ದೇ ಒಬ್ಬನೆ ಒಬ್ಬ ಎಕ್ಸಿಕುಟಿವ್ ಇಂಜಿನಿಯರ್, ಎರಡು ಅಸಿಸ್ಟೆಂಟ್ ಇಂಜಿನಿಯರ್ಸ್. ಈಗ ಕೊಡಗಿನ ವಿದ್ಯಾವಂತರು ಚೀಫ್ ಇಂಜಿನಿಯರ್, ಸುಪರಿಂಟೆಂಡ್ ಇಂಜಿನಿಯರ್ ಹಲವಾರು ಎಕ್ಸಿಕ್ಯುಟಿವ್ ಇಂಜಿನಿಯರ್ ಹಾಗೂ ಅಸಿಸ್ಟೆಂಟ್ ಎಕ್ಸಿಕ್ಯುಟೀವ್ ಇಂಜಿನಿಯರಾಗಿ ಕೆಲಸ ಮಾಡುತ್ತಿದ್ದಾರೆ. ಯುವತಿಯರಿಗೆ ಮತ್ತು ಯುವಕರಿಗೆ ಎಲ್ಲಾ ಕಾಲೇಜುಗಳಲ್ಲಿ ಅವರವರ ಅರ್ಹತೆಗಳ ಮೇಲೆ ಸೀಟ್ ಸಿಗುತ್ತಿದೆ. ಆದರೆ ಕೊಡಗು ಪ್ರತ್ಯೇಕ ರಾಜ್ಯವಾದರೆ ಈ ಕಾಲೇಜುಗಳೆಲ್ಲಾ ಹೊರ ರಾಜ್ಯದ ಕಾಲೇಜುಗಳಾಗಿ ನಮ್ಮ ಯುವ ವಿದ್ಯಾವಂತರಿಗೆ ಅವರ ಬುದ್ಧಿಮತ್ತೆಯನ್ನು ಬೆಳೆಸುವ ಸಂದರ್ಭಗಳು ತೀರಾ ಕಡಿಮೆ ನಮ್ಮ ಯುವಕ ಯುವತಿಯರು ಬೇರೆ ಬೇರೆ ರಾಜ್ಯಗಳಿಗೆ ಹೋಗಿ ಅವರ ಸ್ವಪ್ರಯತ್ನದಿಂದ ಅಥವಾ ಲಕ್ಷ ಲಕ್ಷ ರೂಪಾಯಿ



ಡೊನೇಷನ್ ತೆತ್ತು ಸೀಟುಗಳನ್ನು ಗಿಟ್ಟಿಸಿ ಕೊಳ್ಳುವುದು ಸಾಧ್ಯವೇ? ಈ ರೀತಿ ಮಾಡಲು ಬಡವರಾಗಿರುವವನಿಗೆ ಎಲ್ಲಿಂದ ಸಾಧ್ಯ? ಹೇಳಿ?

**ಇನ್ನು ರಾಜ್ಯದ ನಿರ್ವಹಣೆ :**

ಒಂದು ರಾಜ್ಯವೆಂದರೆ ಒಂದು ವಿಧಾನಸೌಧ ಬೇಕು. ಒಂದು ಹೈಕೋರ್ಟ್ ಬೇಕು. ಕೊಡಗಿನಂತ ಚಿಕ್ಕ ರಾಜ್ಯಕ್ಕೆ ಒಂದು ಹೈಕೋರ್ಟು ಸ್ಥಾಪನೆಗೆ ಸಾಧ್ಯವಾಗುತ್ತದೆಯೋ? ಕೊಡಗಿನ ನ್ಯಾಯಾಲಯಗಳು ಒಂದೋ ಕರ್ನಾಟಕ ಅಥವಾ ಕೇರಳದ ಶ್ರೇಷ್ಠ ನ್ಯಾಯಾಲಯದ ಅಧೀನದಲ್ಲಿ ಕೆಲಸ ಮಾಡಬೇಕಾಗುತ್ತದೆ. ಉದಾ : ಹರಿಯಾಣ ರಾಜ್ಯವಾದರೂ ಹರಿಯಾಣಕ್ಕೆ ಪ್ರತ್ಯೇಕ ಹೈಕೋರ್ಟ್ ಇಲ್ಲ. ಪಂಜಾಬ್ ಮತ್ತು ಹರಿಯಾಣಕ್ಕಾಗಿ ಒಂದೇ ಹೈಕೋರ್ಟು ಇದೆ. ಹಾಗಿರುವಾಗ ಕೊಡಗಿನ ಸ್ಥಿತಿಯೂ ಅದೇ ರೀತಿಯಾಗುತ್ತದೆ. ಹಾಗಿರುವಾಗ ಪ್ರತ್ಯೇಕ ರಾಜ್ಯವಾಗಿ ಏನು ಪ್ರಯೋಜನವಾಗುತ್ತದೆ? ಉತ್ತರ ಕರ್ನಾಟಕದವರು ಹುಬ್ಬಳ್ಳಿಯಲ್ಲಿ ಕರ್ನಾಟಕದ ಹೈಕೋರ್ಟು ಬೆಂಚ್ ಕೊಡಬೇಕೆಂದು ಈಗ ಹಲವಾರು ವರ್ಷಗಳಿಂದ ಗಲಾಟೆ ಎಬ್ಬಿಸಿದರು? ಇಲ್ಲಿಯವರೆಗೆ ಏನು ಆಗಿದೆ? ಉತ್ತರ ಕರ್ನಾಟಕದ ಧಾರವಾಡ, ಗುಲ್ಬರ್ಗ, ಬೀದರ್, ರಾಯಚೂರು, ಬೆಳಗಾಂ, ಬಳ್ಳಾರಿ ಈ ಎಲ್ಲಾ ಜಿಲ್ಲೆಗಳು ಕೊಡಗಿನ ವಿಸ್ತೀರ್ಣಕ್ಕಿಂತ ನಾಲ್ಕೈದು ಪಾಲಿನಷ್ಟು ದೊಡ್ಡ ಪ್ರದೇಶವಾಗಿದೆ. ಪರಿಸ್ಥಿತಿ ಹೀಗಿರುವಾಗ ಕೊಡಗಿಗೊಂದು ಸ್ವಂತ ಹೈಕೋರ್ಟು ಸಿಗುವುದು ಬರೇ ಕನಸು ಅಷ್ಟೆ.

ಈಗ ನಮ್ಮ ಜಿಲ್ಲಾ ಆದಾಯವನ್ನು ನೋಡೋಣ. ಸರ್ಕಾರದ ಅಂದಾಜಿನಂತೆ ಕೊಡಗಿನಿಂದ ತೆರಿಗೆ ಮುಖಾಂತರ ಹಣ ವರ್ಷಕ್ಕೆ 60-70 ಕೋಟಿಗಳು. ಇದರಲ್ಲಿ ಕಂದಾಯ ಇಲಾಖೆಯಿಂದ ಬರುವ ಹಣ ಅತೀ ಕಡಿಮೆ. ಯಾಕೆಂದರೆ ಕೊಡಗಿನ ಜಮ್ಮ ಭೂಮಿಗೆ ಸಾಗು ಭೂಮಿಗಿಂತ ಅರ್ಧದಷ್ಟು ಮಾತ್ರ ಕಂದಾಯ ವಿಧಿಸಿದ್ದಾರೆ. ಕಾಫಿ ಫಲವತ್ತಾದ ಪ್ರದೇಶಗಳಲ್ಲಿ ಮಾತ್ರ ಕಂಡು ಬರುತ್ತದೆ. ಮಳೆ ಹೆಚ್ಚು ಬೀಳುವ ಪಶ್ಚಿಮ ಘಟ್ಟದ ಸರಹದ್ದಿನಲ್ಲಿ ಕಿತ್ತಳೆ ಮರಗಳೆಲ್ಲಾ ನಾಶವಾಗಿಹೋಗಿದೆ. ಕಾಫಿಯಾದರೂ ಈಗ ಮೂರು ವರ್ಷಗಳಿಂದ ಬೆಲೆ ಉಸಿರಾಡುವ ರೀತಿಯಲ್ಲಿ ಇಲ್ಲ ಈಗಿನ 70-80 ರೂ. ದಿನಗೂಲಿ ಕೊಟ್ಟು ತೋಟದ ಕೆಲಸವನ್ನು ಮಾಡಿಸುತ್ತಿರುವ ಸಣ್ಣ ಹಿಡುವಳಿ ಕಾಫಿ ಬೆಳೆಗಾರರ ಅದರಲ್ಲೂ ರೋಬಸ್ಟ್ ಬೆಳೆಗಾರನ ಆದಾಯ ಅಲ್ಲಿಂದಲ್ಲಿಗೆ ತೂಗುತ್ತಾ ಹೋಗುತ್ತಿದೆ. ಅರೆಬಿಕಾ ಬೆಳೆಗಾರರು ಅದರಲ್ಲೂ 100 ಎಕರೆಗಿಂತ ಹೆಚ್ಚಿರುವ ಬೆಳೆಗಾರರು ಒಂದು ರೀತಿಯ ಸಮೃದ್ಧಿಯ ಜೀವನವನ್ನು ನಡೆಸುತ್ತಿದ್ದಾರೆ. ಕಾಫಿಯ ಬೆಳೆ ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕುಸಿದು ಹೋದರೆ ತಾನೂ ಕೆಲಸ ಮಾಡಲಿಕ್ಕೆ ಸಾಧ್ಯವಿಲ್ಲದೆ ಕೂಲಿಗಾರರಿಂದ ಕೆಲಸ ಮಾಡಿಸಲಿಕ್ಕೆ ಸಾಧ್ಯವಿಲ್ಲದೆ ತೋಟವನ್ನು ಬಂಜರು ಬಿಡುವ ಸಂದರ್ಭ ಬಂದು ಆರ್ಥಿಕ ಪರಿಸ್ಥಿತಿ ಹದಗೆಟ್ಟು ಹೋಗಬಹುದು. ಇತರ ಬೆಳೆಗಳಾದ ಏಲಕ್ಕಿ, ಕಿತ್ತಳೆ, ಜೇನು ಏನೂ ಉಳಿದಿಲ್ಲ.

ಒಂದನೇ ಮಹಾಯುದ್ಧ 1916ನೇ ಇಸವಿಯಲ್ಲಿ ಮಾರುಕಟ್ಟೆ ಕುಸಿದಾಗ ಎಷ್ಟೋ ಪ್ಲಾಂಟರುಗಳೇಕೆ ಸಣ್ಣ ಹಿಡುವಳಿದಾರರು ಸಹ ಕಂದಾಯ ಕಟ್ಟಲು ಸಾಧ್ಯವಿಲ್ಲದೆ ಸರ್ಕಾರ ಜಮ್ಮಾದ ಜಾಗಗಳನ್ನು ಪೈಸಾರಿಯಾಗಿ ಪರಿವರ್ತಿಸಿದಂತ ಎಷ್ಟೋ ನಿದರ್ಶನಗಳಿವೆ. ಈ ರೀತಿಯ ನಿದರ್ಶನ ನನ್ನ ಮನೆತನದಲ್ಲೂ ನಡೆದಿದೆ. ಪರಿಸ್ಥಿತಿ ಹೀಗಿರುವಾಗ ಈ ಆಧಾರದ ಮೇಲೆ ಅವುಗಳಿಂದ ಬರುವ ತೆರಿಗೆಗಳಿಂದ ಒಂದು ಪ್ರತ್ಯೇಕ ರಾಜ್ಯ ಸ್ಥಾಪನೆ ಅಷ್ಟೊಂದು ಸುಲಭದ ಕೆಲಸವೂ ಅಲ್ಲ, ಸಮಂಜಸವೂ ಅಲ್ಲ, ಸಾಧುವೂ ಅಲ್ಲ. ಇದರಿಂದ ಯಾವ ರೀತಿಯ ಪ್ರಗತಿಯೂ ಸಾಧ್ಯವಿಲ್ಲ. ನಾವು ಈಗ ಮಾಡಿಕೊಳ್ಳುವ ಈ ಸ್ವಯಂ ನಿರ್ಮಿತ ಘೋಷಿತ ರಾಜ್ಯ ನಮ್ಮ ಮುಂದಿನ ಪೀಳಿಗೆಗೆ ಒಂದು ಶಾಪವಾಗಿ ಪರಿಣಮಿಸೀತು. ಯಾವುದೇ ಒಂದು ದೇಶ, ರಾಷ್ಟ್ರದ ಅಥವಾ ರಾಜ್ಯದ ದೀರ್ಘವಾದ ಚರಿತ್ರೆಯನ್ನು ತೆಗೆದು ಕೊಳ್ಳಬೇಕು. ಕ್ಷಣಕಾಲಿಕ ಯೋಜನೆಗಳಿಂದ ನಾವು ವಂಶ ಪಾರಂಪರ್ಯವಾಗಿ ಕಷ್ಟಕ್ಕೆ ಬೀಳುವ ಯಾವುದೇ ರೀತಿಯ ದುರಾಲೋಚನೆಯ ಯೋಜನೆಗಳು ನಮ್ಮ ಭಾವೀ ಜನಾಂಗಕ್ಕೆ ಮಾರಕವಾಗಬಾರದು. ಇಂತಹ ಯೋಜನೆ ಹಾಗೂ ಹೋರಾಟಗಳು ಶಾಶ್ವತವಾದ ಅಭಿವೃದ್ಧಿಗೆ ನಾಂದಿಯಾಗಬೇಕಲ್ಲದೆ ಮಾರಿಯಾಗಬಾರದು

ಕೊಡಗು ಇಂದಿನವರೆಗೂ ಹಲವು ಕೆಲವು ಸಣ್ಣ ಪುಟ್ಟ ಗುಂಪು ಘರ್ಷಣೆಗಳ ಹೊರತು ಶಾಂತಿಯಿಂದ ಬಾಳಿ ಬದುಕಿದ ಪ್ರದೇಶ. ಎಲ್ಲಾ ಪಂಗಡಗಳೂ ಸೌಹಾರ್ದವಾಗಿ ಪ್ರೀತಿಯಿಂದ ಇನ್ನೊಬ್ಬರ ಕಷ್ಟದ ಕಾಲದಲ್ಲಿ ನೆರವಾಗಿ ಶಾಂತಿಯಿಂದ ಬದುಕಿ ಬಾಳಿದ ನಾಡು. ಇಲ್ಲಿನ ಸಂಸ್ಕೃತಿ ಬೇರೆ ಪ್ರಾಂತ್ಯದ ಸಂಸ್ಕೃತಿಗಿಂತ ಭಿನ್ನವಾಗಿದೆ. ಹುತ್ತರಿ ಹಬ್ಬವನ್ನು, ಕಾವೇರಿ ಸಂಕ್ರಮಣ ಹಬ್ಬದ ಆಚರಣೆಯಲ್ಲಿ ಕೈಲ್ ಮುಹೂರ್ತ ಆಚರಣೆ ಆ ದಿನ ನಡೆಯುವ ಆಚರಣೆಗಳಲ್ಲಿ ಎಲ್ಲಾ ಜಾತಿ ಮತ್ತು ಮತದವರು ಯಾವ ಭೇದ ಭಾವವಿಲ್ಲದೆ ನಡೆಸಿಕೊಂಡು ಬಂದಿರುವ ಖ್ಯಾತಿ ಕೊಡಗಿನ ಜನರದು. ಕೊಡಗಿನ ಜನತೆಯ ಅತಿಥಿ ಸತ್ಕಾರ ಪ್ರೀತಿ ಆದರತೆ ಇಡೀ ಭರತ ಖಂಡಕ್ಕೆ ಮೇಲ್ಪಂಕ್ತಿಯಾಗಿದೆ.

ಕೊಡಗಿನ ಹಿಂದಿನ ಸಂಸ್ಕೃತಿ ಎಲ್ಲ ಕೋಮಿನವರೂ ಮರೆಯುತ್ತಾ ಬಂದಿದ್ದಾರೆ. ಕೊಡಗಿನ ವಿದ್ಯಾವಂತರು ಹೊರನಾಡಿಗೆ ಹೋಗಿ ನೆಲಸಿ ತಮ್ಮ ಸಂಸ್ಕೃತಿಯನ್ನು ಮರೆಯುತ್ತಿದ್ದಾರೆ. ಒಂದಾನೊಂದು ಕಾಲದಲ್ಲಿ ಸುವ್ಯವಸ್ಥಿತ ಸ್ಥಿತಿಯಲ್ಲಿದ್ದ ಜನರ ಐನ್ ಮನೆಗಳು ಯಾರೂ ಕೇಳದ ರೀತಿಯಲ್ಲಿ ಮೌನ ವಾತಾವರಣ ಹಬ್ಬಿದ್ದು ಇವುಗಳನ್ನು ಯಾರೂ ಕೇಳುವವರಿಲ್ಲವೇ ಎಂಬಂತೆ ಗತಕಾಲದ ವೈಭವವನ್ನು ಸಾರುವ ಮೂಕಸ್ಮಾರಕಗಳಾಗಿ ಮನೆಯಲ್ಲಿ ವಾಸವಿಲ್ಲದೆ ನಿಂತಿವೆ. ಕೆಲವು ಬಿದ್ದು ನಾಶವಾಗಿದೆ.

ಕೊಡಗಿನ ಹಿಂದಿನ ಒಟ್ಟು ಕುಟುಂಬದ ಪದ್ಧತಿ ನುಚ್ಚು ನೂರಾಗಿ ನವನಾಗರೀಕತೆಯ ಸೋಂಕಿನಿಂದಾಗಿ ಮನೆತನಗಳ ಐನ್ ಮನೆಗಳನ್ನು ಕೇಳುವವರಿಲ್ಲವಾಗಿದೆ. ಈ ರೀತಿಯ ಸ್ಥಿತಿಯನ್ನು ಉದ್ಧರಿಸುವುದಕ್ಕೆ ಯಾವ ರೀತಿಯ ಸಂಘಟನೆಯೂ ಇಲ್ಲ. ವಿದ್ಯಾವಂತರಾದವರಿಗೆ ಹಣವಂತರಿಗೆ ಹಳೆಯ ಸಂಸ್ಕೃತಿ ಬೇಡವಾಗಿದೆ. ದಿನೇ ದಿನೇ ಇಲ್ಲಿನ ಸಂಸ್ಕೃತಿ ಕುಸಿಯುತ್ತಿದೆ. ಈ ರೀತಿ ಆದರೆ ಇನ್ನೈವತ್ತು ವರ್ಷಗಳಲ್ಲಿ ಕೊಡಗಿನವರ ಸಂಸ್ಕೃತಿ ನಿರ್ನಾಮವಾಗಿ ಅದರ ಬದಲು ಕೊಡಗಿನಲ್ಲದ ಆಚಾರ ವಿಚಾರಗಳಿಗೆ ಹಾದಿ ಮಾಡಿಕೊಡುತ್ತಿದೆ. ವಿದ್ಯಾವಂತ ಕೊಡಗಿನ ಜನ ಬೇರೆ ಬೇರೆ



ಹೊರ ಊರುಗಳಿಗೆ ಹೋಗಿ ನೆಲಸಿ ತಮ್ಮ ಆಸ್ತಿ ಪಾಸ್ತಿಗಳನ್ನು ಮಾರಾಟ ಮಾಡುತ್ತಿದ್ದಾರೆ. ಈ ರೀತಿಯ ಒಲಸೆ ಮುಂದುವರಿದರೆ ಕೊಡಗು ಜಿಲ್ಲೆ ಪರಿಸ್ಥಿತಿ ದಿನದಿಂದ ದಿನಕ್ಕೆ ಹಾಳಾಗುತ್ತಿದೆ. ಇವುಗಳನ್ನು ಸರಿ ಪಡಿಸುವುದಕ್ಕೆ ಶ್ರೀ ನಾಚಪ್ಪನವರೂ ಹಾಗೂ ಅವರು ಕಟ್ಟಿದ ಮೋರ್ಚ ಪ್ರಯತ್ನ ಪಡಲಿ. ಆ ರೀತಿಯಲ್ಲಿ ಪ್ರಯತ್ನ ಪಟ್ಟ ಕೊಡಗಿನ ಸಂಸ್ಕೃತಿ ಅಲ್ಲದೆ ಕೈಗಾರಿಕೆಗಳಲ್ಲಿ ಬಹಳ ಹಿಂದಿರುವ ಕೊಡಗು ದೊಡ್ಡ ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸಲು ಇಲ್ಲಿನ ರಸ್ತೆ ಸಾರಿಗೆ ಸಂಪರ್ಕ ಕ್ಲಿಷ್ಟಕರವಾದುದರಿಂದ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಿ ನಮ್ಮ ಯುವಕ ಯುವತಿಯರು ಸಣ್ಣ ಸಣ್ಣ ಉದ್ಯೋಗಕ್ಕಾಗಿ ಮೈಸೂರು, ಬೆಂಗಳೂರು, ಮಂಗಳೂರುಗಳಂತಹ ಮಹಾನಗರಗಳಿಗೆ ಒಲಸೆ ಹೋಗುವ ಸಂದರ್ಭವನ್ನು ತಪ್ಪಿಸಿ ಇಲ್ಲಿಯೇ ನೆಲೆನಿಂತು ನಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳಬಹುದು. ನಮ್ಮಲ್ಲಿ ಮಧ್ಯಮ ಹಾಗೂ ಕೆಳಮಧ್ಯಮ ವರ್ಗದ ಜನರ ಜೀವನ ಪರಿಸ್ಥಿತಿ ಅಷ್ಟೇನು ಉತ್ತಮ ಸ್ಥಿತಿಯಲ್ಲಿ ಇಲ್ಲ. ಈ ಹಂತದ ಯುವತಿಯರು ಮತ್ತು ಯುವಕರು ತಮ್ಮ ಜೀವನೋಪಾಯಕ್ಕಾಗಿ ಕೊಡಗಿನಿಂದ ಹೊರಗೆ ಹೋಗಲೇ ಬೇಕಾದ ಪರಿಸ್ಥಿತಿ ಬಂದಿದೆ. ಈ ವರ್ಗದ ಯುವಕ ಯುವತಿಯರಿಗೆ ತಮ್ಮ ಪಿತ್ರಾರ್ಜಿತವಾಗಿ ಬಂದ ಅಲ್ಪ ಸ್ವಲ್ಪ ಆಸ್ತಿಗಳಲ್ಲಿ ಜೀವನ ಸಾಗಿಸಲು ಸಾಧ್ಯವಿಲ್ಲದೆ ಅದೆಷ್ಟೋ ಯುವಕರು ಚಿಕ್ಕ ಮಂಗಳೂರಿನ ಕಾಫಿ ತೋಟಗಳಲ್ಲಿ ತೋಟದ ಮ್ಯಾನೇಜರರೋ ಅಥವಾ ರೈಟರುಗಳಾಗಿ ಕೆಲಸ ಮಾಡುತ್ತಿದ್ದಾರೆ. ಇದೇ ವರ್ಗದ ಯುವಕ ಯುವತಿಯರು ಬೆಂಗಳೂರು, ಮೈಸೂರು ಮತ್ತು ಮಂಗಳೂರು ಹಾಗೂ ಇನ್ನಿತರ ಮಹಾನಗರಗಳ ರಾಷ್ಟ್ರೀಕೃತ ಕಾರ್ಖಾನೆಗಳಲ್ಲಿ ಹಾಗೂ ಖಾಸಗೀ ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದಾರೆ. ಕೊಡಗು ಪ್ರತ್ಯೇಕ ರಾಜ್ಯವಾದರೆ ಇವರಿಗೆಲ್ಲಾ ಯಾರು ಉದ್ಯೋಗವನ್ನು ಕಲ್ಪಿಸುತ್ತಾರೆ? ಇವರಿಗೆಲ್ಲಾ ತೊಂದರೆಯಾಗುವುದಿಲ್ಲವೇ? ವ್ಯವಸಾಯವೇ ಪ್ರಧಾನವಾದ ಈ ಅತೀ ಚಿಕ್ಕ ಜಿಲ್ಲೆಯಲ್ಲಿ ಬರುವ 60 - 70 ಕೋಟಿ ಆದಾಯದಿಂದ ಇಲ್ಲಿಯವರೆಗೆ ಆದ ಅಭಿವೃದ್ಧಿ ಕಾರ್ಯಗಳು ಮುಂದುವರಿದು ಕೊಂಡು ಹೋಗಲು ಸಾಧ್ಯವೇ? ಕೊಡಗಿನ ಜನರ ಅಭಿವೃದ್ಧಿ ಕಾರ್ಯ ಇಲ್ಲಿ ಬರುವ ಆದಾಯದಿಂದ ನಡೆಸಿಕೊಂಡು ಹೋಗಲು ಸಾಧ್ಯವೇ? ಇದನ್ನೆಲ್ಲಾ ಶ್ರೀ ನಾಚಪ್ಪನವರು ಹಾಗೂ ಅವರ ಮೋರ್ಚಾದವರು ಲೆಕ್ಕ ಹಾಕಿದ್ದಾರೆಯೇ? ಇದಕ್ಕೆ ನಾಚಪ್ಪನವರು ಜನತೆಗೆ ಸಮರ್ಪಕವಾದ ಸರಿಯಾದ ಪ್ರತೀ ಇಲಾಖಾವಾರು ಅಂಕಿ ಅಂಶಗಳಿಂದ ತಿಳುವಳಿಕೆ ಕೊಡಬೇಕು. ಅದಲ್ಲದೆ ಬರೇ ಬಾಯಿ ಮಾತಿನಲ್ಲಿ ಕೊಡಗು ರಾಜ್ಯದ ಕನಸು ಮಾರಕವಾದೀತು. ಇದಕ್ಕಿಂತ ಕೊಡಗಿಗೊಂದು ಪ್ರತ್ಯೇಕ ಲೋಕ ಸಭಾ ಸ್ಥಾನಕ್ಕಾದರೂ ಹೋರಾಡಿದರೆ ಕೊಡಗಿನವರಿಗೆ ಕೇಂದ್ರದಲ್ಲಿ ಒಂದು ಸ್ಥಾನ ಗಳಿಸಬಹುದು. ಪ್ರತಿಯೊಂದು ಅಂಕೆ ಸಂಖ್ಯೆಗಳನ್ನು ನೀಡಿ ಜನರಿಗೆ ತಿಳುವಳಿಕೆ ಕೊಡಬೇಕೆಂದು ಈ ಮೂಲಕ ಕೇಳಿಕೊಳ್ಳುತ್ತೇನೆ.

ಪ್ರೊ. ಪೂಜಾರಿ ಮೊಣ್ಣಪ್ಪ, ಬೆಂಗಳೂರು

13ನೇ ಪುಟದಿಂದ

ನನಗೆ ಅನಿಸುತ್ತೆ ಇದರ ಹಿಂದೆ ಪ್ರಸನ್ನನ ಕೈವಾಡ ಇದೆ ಅಂತ! ಅವನೇ ಏನೋ ಮಾಡಿರಬೇಕು !

ಪ್ರಸನ್ನನನ್ನು ನಾನು ಬಿಡಲಾರೆ !

ಇನ್ನೊಂದು ಪುಟದಲ್ಲಿ ಅವನನ್ನು ಸಾಯಿಸಬೇಕು ಅಂತ ರಾತ್ರಿಯೆಲ್ಲಾ ನಿದ್ದೆಗೆಟ್ಟು ಪ್ಲಾನ್ ರೆಡಿಮಾಡಿದೆ !

ಆದರೆ ಅದನ್ನು ಕಾರ್ಯಗತ ಮಾಡಲಿಲ್ಲ !

ನನಗ್ಯಾಕೋ ಭಯವಾಗುತ್ತದೆ.

ಪ್ರಸನ್ನನಿಗೆ ನನ್ನ ಪ್ರಯತ್ನದ ಬಗ್ಗೆ ಗೊತ್ತಾದರೆ ಅವನು ಖಂಡಿತಾ ನನ್ನನ್ನು ಉಳಿಸಲಾರ !

ಮತ್ತೊಂದು ಪುಟದಲ್ಲಿ ....ಛೇ.......ಛೇ....ನಾನು ತುಂಬಾ ಹೇಡಿ ! ಬರೀ ಆಲೋಚಿಸುತ್ತೇನೆ. ಆದರೆ ಅದನ್ನು ಕಾರ್ಯ ರೂಪಕ್ಕೆ ತರುವ ಧೈರ್ಯ, ಬುದ್ಧಿವಂತಿಕೆ ಇಲ್ಲ! ಬರೀ ಕಲ್ಪನೆಯಲ್ಲೇ ಪ್ರಸನ್ನನನ್ನು, ಸಾಯಿಸುತ್ತಿದ್ದೇನೆ !

ಬರಹ ಮುಕ್ತಾಯವಾಗಿತ್ತು !

ಡೈರಿ ಕೈಯಿಂದ ಜಾರಿ ಬಿದ್ದಿತು !

ಪ್ರಸನ್ನನಿಗೆ ಆಶ್ಚರ್ಯ !

ಅದರೊಂದಿಗೆ ಭಯ....ಭಯ..: !

ಅರುಂಧತಿ ನನ್ನನ್ನು ಸಾಯಿಸಲು ಒಂದೇ ಒಂದು ಸಲ ಸಹ ಪ್ರಯತ್ನಿಸಿಲ್ಲ, ಬರೀ ಪ್ಲಾನ್ ಮಾಡಿದ್ದಾಳೆ !

ಹಾಗಾದರೆ... ಹಾಗಾದರೆ ಎರಡು ಸಲ ನನ್ನನ್ನು ಸಾಯಿಸಲು ಪ್ರಯತ್ನಿಸಿದ್ದು ಯಾರು?

ಸೈಲೆನ್ಸರ್ ಪಿಸ್ತೂಲಿನಿಂದ !

ರಮ್‌ನಲ್ಲಿ ಮಿಥೇಲ್ ಬೆರೆಸಿ !

ಒಂದು ಸಲ ಅಕ್ಕನ ಬಳಿ ಸಹ ಸಿಕ್ಕಿತ್ತಲ್ಲ ! ಇದು... ಇದು ಹೇಗೆ ಸಾಧ್ಯವಾಯಿತು?

ಅಕ್ಕ ಅಲ್ಲ... ! ಅಕ್ಕನ ಮೇಲೆ ಅನುಮಾನ ಬರುವಂತೆ ಬೇರೆ ಯಾರೋ ನನ್ನನ್ನು ಸಾಯಿಸಲು ಪ್ರಯತ್ನಿಸಿದ್ದಾರೆ !

ಯಾರು...ಯಾರದು !?

**(ಮುಂದುವರೆಯುತ್ತದೆ)**

---

## ತಿದ್ದುಪಡಿ

ಸಂಪುಟ 4, ಸಂಚಿಕೆ 2ರಲ್ಲಿ ದಿನಾಂಕ 31-12-1999ರಂದು ಗೌಡ ಸಾಂಸ್ಕೃತಿಕ ಅಕಾಡೆಮಿ ವತಿಂದ ನಡೆದ ಫ್ಯಾಶನ್ ಶೋನಲ್ಲಿ ದ್ವಿತೀಯ ಬಹುಮಾನ ಪಡೆದವರು ಪುಳಕಂಡ್ರ ಪ್ರದೀಪ್ ತಿಮ್ಮಯ್ಯ ಎಂದು ಮುದ್ರಣಗೊಡಿದೆ. ಅದನ್ನು ಪರಿಚನ ಪ್ರದೀಪ್ ತಿಮ್ಮಯ್ಯ ಅಂತ ಸರಿಯಾಗಿ ಓದಿಕೊಳ್ಳುವುದು. ಕಳುಹಿಸಿದ ವರದಿಯ ಮೂಲ ಪ್ರತಿಯಲ್ಲಿಯೂ ಸಹ ಪುಳಕಂಡ್ರವೆಂದೆ ಇರುವುದರಿಂದ ಯಥಾವತ್ತಾಗಿ ಪ್ರಕಟಿಸಲಾಗಿದೆ. ಓದುಗರು ಎಂದಿನಂತೆ ಸಹಕರಿಸುವಂತೆ ವಿನಂತಿ

ಸಂಪಾದಕಿ



# ಅತಿ ಆಸೆ ಗತಿ ಗೇಡ್

ಒಂದು ಊರುಲಿ ಇಬ್ಬರು ಅಣ್ಣ ಮತ್ತೆ ತಮ್ಮ ಇದ್ದೊ, ಅಣ್ಣನ ಹೆಸರ್ ರಾಮಣ್ಣ ತಮ್ಮನ ಹೆಸರ್ ಭೀಮಣ್ಣ. ಅಣ್ಣ ಬಾರಿ ಶ್ರೀಮಂತ, ತಮ್ಮ ಬಾರಿ ಬಡವ ಅವು ಹೀಂಗೆ ಇರ್‌ಕಾಕನ ಒಂದು ದಿನ ತಮ್ಮ ಭೀಮಣ್ಣ ಎಂಥ ಮಾಡ್ತ್ ಗೊತ್ತ? ಇನ್ ನಾನ್ ಬದ್ಕಿ ಸುಃಖಿ ಇಲ್ಲೆತ ಗ್ಯಾನ ಮಾಡಿಕಂಡ್ ನಮ್ಮ ಮನೆಲಿ ತಿಂಬಕ್ಕೆ ಒಂದು ಕಾಳ್ ಅಕ್ಕಿ ಇಲ್ಲೆ. ನಾನ್ ಎಲ್ಲಾರ್ ಹೋಗಿ ಸತ್ತನೆತ ಗ್ಯಾನ ಮಾಡಿಕಂಡ್ ಇಂವ ಹೋಗಿ ಒಂದು ಹೊಳೆ ಬುಡಲಿ ಮರ್ಬ್‌ಕಂಡ್ ಕುದ್ದದೆ. ಅಷ್ಟು ಹೊತ್ತಿಗೆ ಈಶ್ವರನು ಪಾರ್ವತಿನೂ ಎಲ್ಲಿಗೊ ಲೋಕ ಸಂಚಾರ ಹೊರಟ್ಟಿದ್ದವೆ. ಆಗ ಭೀಮಣ್ಣ ಮರ್‌ಡ್‌ವ ಸದ್ ಪಾರ್ವತಿಗೆ ಕೇಳ್‌ದೆ. ಆಗ ಪಾರ್ವತಿ ಈಶ್ವರನತ್ತರ ಹೇಳ್ತ್. ಅಲ್ಲಿ ಯಾರೋ ನರಮನುಷ್ಯರ್ ಮರ್ಬ್‌ಕಂಡ್ ಒಳೋಕಂಡದ್ದೆ. ನಂಗೆ ಅವನ ಹತ್ತರ ಹೋಕುತ್ತ ಹೇಳದೆ. ಆಗ ಈಶ್ವರ ಬೈಕಂಡ್ ಹೇಳ್‌ದೆ. ಹೋಗಿ ನೋಡಿಕಂಡ್ ಬಾತಾ. ಆಗ ಪಾರ್ವತಿ ಅಜ್ಜಿರೂಪಲಿ ಭೀಮಣ್ಣ ಕುದ್ದಹತ್ರ ಬಂದದೆ. ಬಂದುಬುಟ್ಟು ಹೇಳ್‌ದೆ ಏಕೆ ನೀನು ಮರ್ಡ್‌ದ್‌ತ್ತ. ಆಗ ಭೀಮಣ್ಣ ಅವನ ಕಷ್ಟಗಳನೆಲ್ಲ ಹೇಳಿಕಂಡದೆ. ಆಗ ಪಾರ್ವತಿ ಹೇಳ್ತ್ ನೀನ್ ಸಾಯಿಬೇಡ ನಾಳೇನ ನೀನ್ ಮೂರು ತೆಂಗಿನ ಕಾಯಿ ಒಂದು ಚಾಲೆಮುಂಡ್ ತಕಂಡ್ ಇದೇ ಹೊತ್ತಿಗೆ ಇಲ್ಲಿ ಕುದ್ದ್‌ಕತ್ತ ಹೇಳ್ತ್. ಇಂವ ಆತ್‌ತ್ತ ಹೇಳಿ ಮನೆಗೆ ಬಾತ್. ಬಂದ್ ಹೆಣ್ಣ್‌ನ ಹತ್ರ ಹೇಳ್ತ್. ನಾನು ಸತ್ತನೆತ್ತ ಹೇಳಿ ಹೊಳೆ ಕರೆಗೆ ಹೋದೆ, ಆಗ ಒಂದು ಅಜ್ಜಿ ನನ್ನ ಹತ್ರ ಬಂದುಬುಟ್ಟು ಹೇಳ್ತ್ ನೀನ್ ಸಾಯಿಬೇಡ. ನಾಳೆ ನೀನ್ ಮೂರು ತೆಂಗಿನ ಕಾಯಿ ಒಂದು ಚಾಲೆಮುಂಡ್ ತಕ್ಕಂಡ್ ಬಾತ್ತ ಹೇಳ್ತ್. ನಾನ್ ಎಲ್ಲಿಂದ ತಕ್ಕಂಡ್ ಹೋದುತಾ ಗ್ಯಾನಮಾಡಿಕಂಡ್ ಕುದ್ದತ್. ಆಗ ಅವನ ಹೆಣ್ಣ್ ಅವಳ ಪೆಟ್ಟಿಗೆಲ್ಲಾ ಹುಡಿಕಿ ಒಂದು ಐದು ರೂಪಾಯಿ ಚಿಲ್ಲರೆ ಕೊಟ್ಟದೆ. ಇಂವ ಅಜ್ಜಿ ಹೇಳಿದ ಸಾಮಾನ್ ತಕ್ಕಂಡ್ ಹೋಗಿ ನೆನ್ನೆ ಕುದ್ದಜಾಗಲಿ ಕುದ್ದ್‌ಕಂಡದೆ ಆಗ ಪುನಃ ಪಾರ್ವತಿ ಅಜ್ಜಿರೂಪಲಿ ಬಂದ್ ಕೇಳ್‌ದೆ. ನಾನ್ ಹೇಳ್ದ ವಸ್ತು ಕೊಡುತ್ತಾ, ಇಂವ ಕೊಟ್ಟತ್ ಪಾರ್ವತಿ ಮೂರು ಕಾಯಿನ ಮಂತ್ರಿಸಿ ಭೀಮಣ್ಣನ ಹತ್ರ ಹೇಳ್ತ್, ನಿಂಗೆ ಯಾವ ಯಾವ ಅನುಕೂಲ ಬೇಕು ಅದನೆಲ್ಲಾ ಹೇಳಿಬುಟ್ಟು ಒಂದೊಂದು ಕಾಯಿ ಹೊಡಿತ್ತಾ ಹೇಳ್ತ್, ಪಾರ್ವತಿ ಮಾಯ ಆತ್. ಭೀಮಣ್ಣ ಮನೆಗೆ ಬಂದ್ ಹೆಣ್ಣ್‌ನ ಹತ್ರ ಹೇಳ್ತ್ ನಮಗೆ ಯಾವ ಯಾವ ಅನುಕೂಲ ಬೇಕು ಅದರನ್ನ ಹೇಳಿಕಂಡ್ ಕಾಯಿ ಹೋಡಿತಾ, ಇಬ್ಬರು ಸೇರಿ ಕಾಯಿ ಹೊಡಿಯಕೆ ಸುರು ಮಾಡಿವೆ.

ಒಂದು ಕಾಯಿ ಹೊಡಿಯಕಾಕನ ಒಂದು ದೊಡ್ಡ ಬಂಗಲೆಯಾಗಲಿತ ಹೇಳಿ ಹೊಡಿಯಕಾಕನ ಒಂದು ಬಂಗಲೆ ಆತ್. ಇನ್ನೊಂದು ಕಾಯಿ ಹೊಡಿಯಕಾಕನ ಈ ಬಂಗಲೆಗೆ ಆಳು ಕಾಳ್ ಅಕ್ಕಿ, ಭತ್ತಯೆಲ್ಲಾ ಆಗಲಪ್ಪತ್ತ ಹೇಳಿ ಕಾಯಿ ಹೊಡಿಕಾಕನ ಅಂವ ಹೇಳ್ದಯೆಲ್ಲಾ ಆತ್. ಮೂರನೇ ಕಾಯಿ ಹೊಡೆಯಕಾಕನ ತೋಟ, ಗದ್ದೆಯಲ್ಲಾ ಆಗಲಿ ತೇಳಿ ಹೊಡ್ತ್. ಅದು ಆತ್ ಆ ಊರ್‌ಲಿ ಅಂವ ಬಾಳ ದೊಡ್ಡ ಶ್ರೀಮಂತ ಆತ್. ಅವು ಹಿಂಗೆ ಇರ್‌ಕಾಕನ ಭೀಮಣ್ಣ ಅವನ ಹೆಣ್ಣ್‌ನೆ ಹತ್ರ ಹೇಳ್ತ್. ನಮ್ಮದ್ ಹೊಸಮನೆಲಾ ಅದಕ್ಕೊಂದು ಹೋಮ ಹಾಕಿ ಊರವಕ್ಕೆ ಮನೆಯವಕ್ಕೆಲ್ಲಾ ಊಟ ಕೊಡೊಕುತ ಹೇಳ್‌ದೆ. ಇವುಳ್ ಆತ್‌ತ್ತ ಹೇಳ್ದ ಹಂಗೆ ಇಂವ ಊರವುಕೆ ಮನೆಯವುಕ್ಕೆ ಹೇಳ್ದದೆ. ಅವುಯೆಲ್ಲಾ ಬಂದೋ ಹೋಮ ಯೆಲ್ಲಾ ಹಾಕಿ ಆತ್. ಊಟ ಉಪಚಾರಯೆಲ್ಲಾ ಆತ್. ಎಲ್ಲಾವೂ ಅವರವರ ಮನೆಗೆ ಹೋದೋ, ಆಗ ಅವರಲ್ಲಿ ಮೂರು ನಾಲ್ಕು ಹೆಂಗ್‌ಸ್‌ಗ ಭೀಮಣ್ಣನ ಹೆಣ್ಣ್‌ನ ಹತ್ರ ಕುದ್ದ್‌ಕಂಡ್ ಕೇಳ್ದೊ. ನೀವು ಹೆಂಗೆ ಇಷ್ಟುಬೇಗ ಶ್ರೀಮಂತರ್‌ಆದ್‌ತ್ತ. ಆಗ ಇವಳು ನೆಡ್‌ದ ಕಥೆನೆಲ್ಲಾ ಹೇಳ್‌ದೆ. ಆದರಲ್ಲಿ ಭೀಮಣ್ಣನ ಅಣ್ಣ ರಾಮಣ್ಣನ ಹೆಣ್ಣ್ ಇದ್ದದೆ. ಇವಳು ಇದನೆಲ್ಲ ಲಾಯ್ಕ ಕೇಳಿಕಂಡದೆ. ಮನೆಗೆ ಹೋಗಿ ಗಂಡನ ಹತ್ರ ಹೇಳ್‌ದೆ. ನೀವು ಸಹ ಸತ್ತೇನೆತ್ತ ಹೇಳಿಕಂಡ್ ಹೊಳೆಹತ್ತರ ಕುದ್ದ್‌ಕಣೆತ ಹೇಳ್ತ್. ಆಗ ರಾಮಣ್ಣ ಅವಳಿಗೆ ಹೇಳ್‌ದೆ ಎಲ್ಲವುಕ್ಕೆ ಹಂಗೆ ಆಲೆ ಅದಕ್ಕೂ ಅದೃಷ್ಟ ಬೇಕೂತ ಹೇಳ್‌ದೆ. ಆಗ ಪುನಃ ಅವಳು ಇಲ್ಲೆ ನೀವು ಹೋಗೆ ಹೋಕುತ ಹಠ ಮಾಡ್‌ದೆ. ಆಗ ರಾಮಣ್ಣ ಅವಳ ಹಠ ತೆಡಿಯಕೆ ಆಗದೆ ಅಂವ ಹೊಳೆ ಹತ್ರ ಹೋಗಿ ಕುದ್ದ್‌ಕಂಡ್ ಮರ್ಬದೆ ಆಗಲೂ ಪಾರ್ವತಿ ಅಜ್ಜಿರೂಪಲಿ ಬಂದ್ ನಿಂಗೆ ಏನ್ ಕಷ್ಟತ ಕೇಳ್‌ಕಾಕನ ಅಂವ ಭೀಮಣ್ಣ ಹೇಳ್‌ದ್‌ಹಂಗೇ ಹೇಳ್‌ದೆ. ಆಗ ಪಾರ್ವತಿ ಹೇಳ್ತ್ ನೀನ್ ನಾಳೆ ಬಾಕನ ಮೂರು ತೆಂಗಿನ ಕಾಯಿ ಒಂದು ಚಾಲೆ ಮುಂಡ್ ತಕ್ಕಂಡ್ ಬಾತ ಹೇಳ್ದೆ. ಇಂವ ಹಂಗೆ ತಕ್ಕಂಡ್ ಬಾತ್. ಆಗ ಪಾರ್ವತಿ ಆ ಕಾಯಿನ ಮಂತ್ರಿಸಿ ಕೊಟ್ಟತ್ ಇಂವನ ಹೆಣ್ಣ್ ಯಾಗ ಬಂದದೆತಾ ಪಾರ್‌ಕಾದ್ ಕಂಡ್ ಕುದ್ದಿತ್. ಆಗ ಇಂವ ಮನೆಗೆ ಬಾತ್ ಇಂವ ಮನೆಗೆ ಹೋಗಿ ಹತ್ತಿಕೆ ಮುಂದೆ ರಾಮಣ್ಣನ ಹೆಣ್ಣ್ ಕೇಳ್‌ದೆ ಅಜ್ಜಿ ಎಂಥ ಹೇಳ್‌ತ್ತ ಕೇಳ್‌ದೆ. ಇವಂಗೆ ಸಿಟ್ಟ್‌ಬಂದ್ ಇಂವ ಹೇಳ್ದದೆ ಎಂಥ ಆದು ನಿನ್ನ ತಲೆ ಆದುತ್ತ ಹೇಳಿ ಒಂದು ಕಾಯಿನ ತೆಗ್ದ್ ಬೀಸಾಡ್‌ದೆ. ಅದು ಬಡ್ದ್ ಹೋತ್. ಆಗ ಅವನ ಮನೆತುಂಬಾ ಅವನ ಹೆಣ್ಣ್‌ನ ತಲೆ ಆಗಿಬಿಡ್ತ್. ಇವಂಗೆ ಅದನ್ನ ನೋಡಿಕೆ ಆತ್‌ಲೆ. ಇಂವ ಈ ತಲೆಗ ಎಲ್ಲಾ ಹೋಗಲಿಯಪ್ಪಾತ್ತ ಹೇಳಿ ಇನ್ನೊಂದು ಕಾಯಿ ಹೊಡ್‌ದದೆ. ಆಗ ಅವನ ಹೆಣ್ಣ್‌ನ ತಲೆ ಹೋಗಿ ಬುಟ್ಟದೆ. ಆಗ ಅವಂಗೆ ಇದರ ನೋಡಿ ಬೇಜಾರ್ ಆದೆ ನಂಗೆ ಏನ್ ಆದು ಬೇಡ. ನನ್ನ ಹೆಣ್ಣ್‌ನ ತಲೆ ಬಂದರೆ ಸಾಕ್ ತೇಳಿ ಮೂರನೇಕಾಯಿ ಬಡ್‌ದದೆ. ಆಗ ಅವಳಿಗೆ ತಲೆ ಬಂದದೆ. ಆದರೆ ಈ ಕಥೆಲಿ ತಿಳಿದ್ ಬರುವ ನೀತಿ ಏನ್ ತೇಳ್‌ರೆ ಅತಿ ಆಸೆ ಬಂದರೆ ಗತಿಗೇಡ್ ಆದುತ. ಹೆಂಗುಟ್ಟು ಅಜ್ಜಿಕಥೆ.

ಮುಕ್ಕಾಟೀರ ಮಮತಾ ಪೂಣಚ್ಚ
ಹೊಸ್ಕೇರಿ



6ನೇ ಪುಟದಿಂದ

8) ಮಂಡ್ಯದಲ್ಲಿ D.A.C.ಯ ಪರವಾಗಿ ನಡೆದ ಇಂಟರ್ ಸ್ಟೇಟ್ ಕ್ರೀಡಾಕೂಟದಲ್ಲಿ ಮೆರಥಾನ್‌ನಲ್ಲಿ(42.195 K.M) ದೂರವನ್ನು 2.ಗಂಟೆ 15ನಿಮಿಷದಲ್ಲಿ ಓಡಿದ್ದು ಇಂದಿಗೂ ಮುರಿಯದ ದಾಖಲೆ.

9) 1982ರಲ್ಲಿ ನಡೆದ ನ್ಯಾಷನಲ್ ಓಪನ್ ಇನ್ವ್‌ಟೇಷನ್ಸ್ ಕ್ರಾಸ್ ಕಂಟ್ರಿ ಸ್ಪರ್ಧೆಯಲ್ಲಿ ದ್ವಿತೀಯ ಸ್ಥಾನ.

10) 1982 ಏಷ್ಯಾಡ್‌ಗಾಗಿ ಭಾರತದಿಂದ ಆಯ್ಕೆಗೊಳ್ಳಬೇಕಾದ ಅರ್ಹತಾ ಶಿಬಿರದಲ್ಲಿ ಬಹು ತ್ರಾಸದಾಯಕ ಸ್ಪರ್ಧೆಯಲ್ಲಿ 2 ಗಂಟೆ 18 ನಿಮಿಷಗಳಲ್ಲಿ ಗುರಿ ಮುಟ್ಟಿ ಸಫಲ.

11) ದೆಹಲಿಯಲ್ಲಿ ನಡೆದ 9ನೇ ಏಷ್ಯನ್ ಕ್ರೀಡಾಕೂಟದಲ್ಲಿ ರಾಷ್ಟ್ರವನ್ನು ಪ್ರತಿನಿಧಿಸಿ ತೃತೀಯ ಸ್ಥಾನಕ್ಕೆ ತೃಪ್ತಿ. ದುರಾದೃಷ್ಟವಶಾತ್ ಸ್ವರ್ಣಪದಕ ವಂಚಿತ. ಕ್ರೀಡಾ ಜಗತ್ತಿನಲ್ಲಿ ದೇಶಕ್ಕೂ, ರಾಜ್ಯಕ್ಕೂ, ಜಿಲ್ಲೆಗೂ ನಮ್ಮ ಅರೆಭಾಷಿಕ ಲೋಕಕ್ಕೂ ಕೀರ್ತಿತಂದ ಹೆಮ್ಮೆಯ ಸುಪುತ್ರ.

13) 24-5-1983ರಲ್ಲಿ ದಕ್ಷಿಣ ಕೊರಿಯಾದಲ್ಲಿ ನಡೆದ ವಿಶ್ವ ಮೆರಥಾನ್‌ನಲ್ಲಿ 8000ಮಂದಿ ಸ್ಪರ್ಧಿಗಳು ಪಾಲ್ಗೊಂಡಿದ್ದ ಕೂಟದಲ್ಲಿ ಸೀತಾರಾಮನಿಗೆ 13ನೇ ಸ್ಥಾನ.

14) 1986 ರಲ್ಲಿ ಪೂನಾದಲ್ಲಿ ಅಂತರರಾಷ್ಟ್ರೀಯ ಮೆರಥಾನ್ ಕೂಟದಲ್ಲಿ 9000ಕ್ರೀಡಾ ಸ್ಪರ್ಧಿಗಳಲ್ಲಿ ಶ್ರೀಯುತರಿಗೆ 5ನೇ ಸ್ಥಾನ.

---

## ಯಾರು ಜಾಣ?

ಸ್ವಂತ ಆರೋಗ್ಯವನು ಕಾಪಾಡುವವ ಜಾಣ
ನಿತ್ಯ ಹಲ್ಲುಗಳನ್ನುಜ್ಜಿ ರಕ್ಷಿಪನು ಜಾಣ
ವಿದ್ಯಾರ್ಥಿ ಯಾಗಿರಲು ಶಿಸ್ತಿನಲಿ ದುಡಿವವ ಜಾಣ
ಸಭೆಗಳಲಿ, ಮೌನಿಯಾಗಿ ಕುಳಿತವನೆ ಜಾಣ
ಸಮಯವನು ಸದುಪಯೋಗಿಸುವವನೆ ಜಾಣ
ಆರ್ಥಿಕ ವ್ಯವಹಾರದಿ ಎಚ್ಚರ ವಹಿಸುವವ ಜಾಣ
ಹಣವನು ಬಳಸುವ ಮಿತವ್ಯಯಿಯೇ ಜಾಣ
ಸತ್ಪಾತ್ರರಿಗೆ ತುಸು ದಾನ ವೀಯುವವ ಜಾಣ
ಪರರ ವ್ಯವಹಾರದಲಿ ತಲೆಯಿಕ್ಕದವರ ಜಾಣ
ತಾರುಣ್ಯದಲಿ ಉದ್ಯೋಗವೊಂದ ಮಾಡುವವ ಜಾಣ
ಮುಕ್ತ ಪ್ರಾಯದಿ ವಿವಾಹವಾಗುವವ ಜಾಣ
ಮಾತಾ ಪಿತೃಗಳ ಸೇವೆ ಮಾಡುವವನೆ ಜಾಣ
ಹಿರಿಯರ ಆಶೀರ್ವಾದಗಳ ಪಡೆವವನೆ ಜಾಣ
ಪರರಿಗೆ ಹಿಂಸೆಯನು ಯೆಸಗದವನೆ ಜಾಣ
ದುಷ್ಟಾಭ್ಯಾಸಗಳಿಂದ ದೂರವಿರುವವನೆ ಜಾಣ
ತರುಣಿಯರ ಸೋದರಿ ಭಾವದಿ ಕಾಂಬವನೆ ಜಾಣ
ಸರಕಾರದ ಕಾನೂನುಗಳ ಅರಿತವನೆ ಜಾಣ
ಲಂಚದ ಅಧಿಕಾರಿಗಳ ತಿದ್ದುವವನೆ ಜಾಣ
ನಿತ್ಯವೂ ತುಸುಹೊತ್ತು ಓದುವವ ಜಾಣ
ಮುಂಜಾನೆ ದೇವರನು ಸ್ತುತಿಸುವವ ಜಾಣ

ವಾಣಿಕುಮಾರ್, ಮಂಡೆಕೋಲು

11ನೇ ಪುಟದಿಂದ

ಮತ್ತೆ ಇಡೀ ಜನಾಂಗಕ್ಕಾಗಿ ಮಾಡ್ವ ಪ್ರಯತ್ನ. ಸಂಸ್ಕೃತಿಯ ಪ್ರತೀಕವೇ, ಈ ನಮ್ಮ ಕಾವೇರಿ ನಾಡ್. ಇದಕ್ಕಾಗಿ ನಾವು ಅಮ್ಮಾಜೀರ ಪೊನ್ನಪ್ಪನವುಕೆ ಬೆಂಗಾವಲಾಗಿಸುದ್ದು ಮುಂದುವರಿವೆ. ನಾವು ಊರಿಗೆ ಬಾಕನ ನೀವು ನಮಿಗೆ ಸಹಕಾರ ಕೊಡಿ. ನಮ್ಮ ಪ್ರಯತ್ನಕ್ಕೆ ಒಂದು ಸಹಕಾರ ಕೊಟ್ಟಂಗಾದೆತ ನೀವು ತಿಳ್‌ಕಣೋಕು. ನಮ್ಮ ಕೆನ್ನೆನ ಇನ್ನೊಬ್ಬಂಗೆ ತೋರುಸುದು ಬೇಡ. ನಾವೇ ಉಜ್ಜಿ ಕಂಡ್ ಬೆಳೆಸಿ ಬೆಳೆಸೋಣಾ. ಕಾವೇರಿ ನಾಡ್‌ಲಿ ದುಡ್ಡು ಕೊಟ್ಟು, ಸಹಕರಿಸಿದವುಕೆ ಕನ್‌ವರ್‌ಸನ್ ಮಾಡಿ, ರಿಜಿಸ್ಟರ್ ಮಾಡಿ ಕೊಡುತ್ತಾ ಒಳೋ. ನಾವಂತು ಕೈಲ್ ಮೂಹರ್ತಕ್ಕೆ ಹಣನ ಯಾರ ಕೈಯಿಂದ ತಕಣದೆ ಮಾಡುವ ಕಾರ್ಯಕ್ರಮ ಇದ್. ಲೆಕ್ಕ ಪತ್ರ ಯಾಕೆ, ಲೆಕ್ಕ ಪತ್ರ ಕೊಟ್ಟರೆ ನೀವು ನಷ್ಟ ಕಟ್ಟಿಕಾದುಲೆ, ಹಿಂಗಾಗಿ ಬೆಳಿತಾ ಇರುವ ಈ ನಾಡ್ ಟ್ರಸ್ಟ್ ಎಂದ್ ಆಕನ ಅದೇ ಮೊದಲು ಬೆಳ್ಸಿ ಕಟ್ಟಿದಕ್ಕೆ ನಾವೆಲ್ಲ ಸಹಕಾರ ಕೊಡನೋ, ನಂತರ ಮುಂದಿನ ವಿಷಯ. ತ್ಯಾಗಮಯಿಯಾದ ಒಳ್ಳೆತನದ ಅಮ್ಮಾಜೀರ ಪೊನ್ನಪ್ಪನವುಕೆ ನಮ್ಮ ಕೈಲಾದ ಸಹಕಾರ ಕೊಟ್ಟು ಬೆಳೆಸಿವೆ. ನೀವು ತಿಳಿಸಿದ ರೀತಿ ಸಂಸ್ಕೃತಿಯ ಬಗ್ಗೆ ಅಂದರೆ ನೀವು ಸರಿಯಾಗಿ ಕಾವೇರಿ ನಾಡ್ ಕಾರ್ಯಕ್ರಮನ ನೋಡ್‌ತ್‌ಲ್ಲೆ ಕಂಡದೆ. ನಾವ್ ಎಲ್ಲಾ ಹಾಡ್‌ಗಳಿಗೆ ಸಂಸ್ಕೃತಿ ಉಡುಗೆ ತೊಟ್ಟ್ ಮಾಡಿ ನಡಿಸಿಯೋಳೊ. ಅಲ್ಲದೆ ಎಲ್ಲಾ ಕಾರ್ಯಕ್ರಮ ಅರೆಭಾಷೆಲಿ ಮಾಡಿ ತೋರಿಸೋಳೊ. ನೀವು ತಿಳಿದಂಗೆ ಯಾವ ಗೌಡ ಸಂಸ್ಕೃತಿಯ ಕಾರ್ಯಕ್ರಮ ಇಲ್ಲೆತ್ತೇಳಿ ಬರ್ದೋಳರಿ. ಆದ್ರೆ ನಾವ್ (ಕಾವೇರಿ ನಾಡ್ ತಂಡ) ಪ್ರತಿ ಕಾರ್ಯಕ್ರಮವು ಗೂಡೆಗ ಗೇಂಟಿ ಕಟ್ಟಿ ಸೀರೆ, ಗಂಡ್‌ಗ ಕುಪ್ಪಸದಟ್ಟಿಲಿ ಉಡುಗೆ ತೊಟ್ಟ್ ಮಾಡಿಸಿ ತೋರಿಸೋಳೊ. ಇದ್ ಸರಿಯಲ್ಲಾ ಎಂದ್ ತಿಳಿದರೆ ಸರಿಯಾದ್ ಯಾವುದುತ ನೀವು ದಯವಿಟ್ಟು ತಿಳಿಸಿ. ಗೌಡ ಜನಾಂಗಕ್ಕೆ ಎಲ್ಲಾ ಗೊತ್ತಾಗಲಿ ಯಾವುದ್ ಸರಿ ತಪ್ಪುತ. ಕೊಡಗು ಸಂಗಾತಿಲಿ ತಿಳಿಸಿದರೆ ಎಲ್ಲವುಕೂ ಪ್ರಪಂಚಕ್ಕೆಲ್ಲಾ ಗೊತ್ತಾದೆ. ದಯವಿಟ್ಟು ತಿಳ್ಸೋಕು ಮರೀಬ್ಯಾಡಿ.

"ಅರೆಭಾಷೆನ ಉಳಿಸಿ ಗೌಡ ಜನಾಂಗನ ಬೆಳಿಸಿ"

**ಕಾಟಲಂಡ ಅಶೋಕ್, ಬೆಂಗಳೂರು**

ಪತ್ರಿಕೋದ್ಯಮಂತೇಳ್‌ದು ಕತ್ತಿ ಬಾಯಿ ಮೇಲೆ ನಡ್‌ದಂಗೆ. ಸ್ವಲ್ಪ ಎಚ್ಚರ ತಪ್ಪಿರೂ ಅಪಾಯ ಕಟ್ಟಿಟ್ಟ ಬುತ್ತಿ. ಅಂತದಲ್ಲಿ ನೀವ್ ಇದನ್ನ ಆರ್ಸಿಕಂಡ್ ಸಮರ್ಥವಾಗಿ ನಡ್‌ಸಿ ಕಂಡ್ ಬರ್ತಾ ಒಳರಿ, ಖಂಡಿತವಾಗಿ ನೀವ್‌ಗೆ ಜಯ ಸಿಕ್ಕಿದೆ. ಯಾವುದ್ ಉದ್ಯಮನು ಸಣ್ಣದರಿಂದಲೆ ದೊಡ್ಡದಾದು. ನಿಮ್ಮ ನಮ್ಮ ಈ ಸಂಗಾತಿ ಪ್ರತಿಯೊಬ್ಬರ ಸಂಗಾತಿ ಆಗಲಿಂತ ನಾನ್ ಹಾರೈಸಿನೆ. ಸಣ್ಣವನೇ ದೊಡ್ಡಂವಾದು, ಬಿದ್ದವನೇ ಏಳ್ದು ತೇಳ್ದು ಮಾತ್ ನಾವ್‌ಗೆಲ್ಲ ಗ್ಯಾನ ಇರ್‍ಲಿ.

ಪೂಜಾರಿ ಜಗದೀಶ್, ಬಿಳಿಗೇರಿ



## ಜೂನ್ ತಿಂಗಳಿನಿಂದ ಮೈಸೂರಿನ ರಂಗಾಯಣದಲ್ಲಿ ಡಿಪ್ಲೋಮ ತರಗತಿ

ರಂಗಾಯಣದಲ್ಲಿ ಮುಂದಿನ ಜೂನ್ ಜುಲೈ ತಿಂಗಳಲ್ಲಿ ಪ್ರಥಮ ಬಾರಿಗೆ ರಂಗಕಲೆಯಲ್ಲಿ ಮೂರುವರ್ಷದ ಡಿಪ್ಲೊಮೊ ತರಗತಿ ಪ್ರಾರಂಭಿಸಲಾಗುವುದು ಎಂದು ನಾಟಕ ಕರ್ನಾಟಕ ರಂಗಾಯಮದ ನಿರ್ದೇಶಕ ಸಿ. ಬಸವ ಲಿಂಗಯ್ಯನವರು ತಿಳಿಸಿದ್ದಾರೆ.

ಸುಮಾರು ಹದಿನೈದು ವಿದ್ಯಾರ್ಥಿಗಳಿಗೆ ಅವಕಾಶ ನೀಡಿ ವಿದ್ಯಾರ್ಥಿವೇತನ ನೀಡಲಾಗುವುದು. ಇದಕ್ಕೆ ಸುಮಾರು ಮೂರು ಲಕ್ಷ ರೂಪಾಯಿ ಖರ್ಚು ಬರುತ್ತದೆ.

ಇದರ ಸದುಪಯೋಗವನ್ನು ನಾಡಿನ ಅರೆಭಾಷಿಕ ಜನಾಂಗ ಪಡೆದುಕೊಳ್ಳುವಂತೆ ಈ ಮೂಲಕ ಜನಾಂಗ ಬಾಂಧವರಲ್ಲಿ ವಿನಂತಿಸಲಾಗಿದೆ.

**- ಸಂಪಾದಕಿ**

## ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಸಮಾಜ ಅಭಿವೃದ್ಧಿ ಸಂಘ (ರಿ)

(ಸುಳ್ಯ ತಾಲ್ಲೂಕು - ದ. ಕ.)

ದಿನಾಂಕ 23-1-2000ನೇ ಆದಿತ್ಯವಾರ ಸುಳ್ಯದ ಜಟ್ಟಿಪಳ್ಳ ರಸ್ತೆಯ ಅಂಚಿನಲ್ಲಿರುವ ಈ ಮೇಲ್ಕಂಡ ಸಂಘದ ನಿವೇಶನದಲ್ಲಿ ದಿ. ಕೆ. ಬಿ. ಕೃಷ್ಣಪ್ಪ ಸಮಾಜಾಭಿವೃದ್ಧಿ ಸಂಘದ ಅಧ್ಯಕ್ಷ ಮತ್ತು ಸಂಘದ ತಾಲೂಕು ಅಧ್ಯಕ್ಷರಾದ ಕೆ. ವಿ. ಹೇಮನಾಥರವರ ನೇತೃತ್ವದಲ್ಲಿ ಸಂಘದ ಕಾರ್ಯಾಲಯವನ್ನು ಖಾಯಂ ಆಗಿ ನೆಲೆಗೊಳಿಸುವ ದೃಷ್ಟಿಯಿಂದ ನಿರ್ಮಿಸಲಾದ ಕೊಠಡಿಯ ಉದ್ಘಾಟನ ಕಾರ್ಯಕ್ರಮವು ನಡೆಯಿತು. **1985ರ ಸಾಲಿನಲ್ಲಿ ಸಮ್ಮೇಳನದ ನಂತರ ದೀರ್ಘ ಕಾಲದಿಂದ ನೆನೆಗುದಿಗೆ ಬಿದ್ದಿದ್ದು ಈಗ ಪುನಃ ಚೇತನಗೊಳ್ಳುವ ನಿಟ್ಟಿನಲ್ಲಿ ಸಂಸ್ಥೆಯ ಏಳಿಗೆಗೆ ಅವಶ್ಯಕವಾದ ಮತ್ತು ಪೋಷಕರ ಸಭೆಯನ್ನು ಕರೆಯಲಾಯಿತು.**

ಈ ಮೇಲಿನ ಸಂಘದ ಹಾಲಿ ಅಧ್ಯಕ್ಷರಾದ ಕೋರನ ಪೂಣಚ್ಚನವರು ಅಧ್ಯಕ್ಷತೆಯನ್ನು ವಹಿಸಿ ಸ್ವಾಗತ ಮತ್ತು ಪ್ರಾಸ್ತಾವಿಕ ಭಾಷಣವನ್ನು ಮಾಡಿದರು. ವಿದ್ಯಾಸಂಸ್ಥೆಯ, ಸುಳ್ಯದ ಶಿಲ್ಪಿ ಕೆ. ವಿ. ಜಿ. ಸಂಸ್ಥೆಯ ಸಂಸ್ಥಾಪಕ ರಾಷ್ಟ್ರೀಯ ಹಲವಾರು ಪುರಸ್ಕಾರಗಳ ವಿಜೇತ ಶ್ರೀ ಕುರುಂಜಿ ವೆಂಕಟರಮಣ ಗೌಡನವರು ಜ್ಯೋತಿ ಬೆಳಗುವುದರ ಮೂಲಕ ಸಭೆಯನ್ನು ಉದ್ಘಾಟಿಸಿದರು.

ನೂತನವಾಗಿ ರಚಿಸುವ "ಗೌಡ ಭವನ" ಎಂಬ ಹೆಸರಿನ ಕಟ್ಟಡದ ನಿರ್ಮಾಣಕ್ಕಾಗಿ ಐದು ಲಕ್ಷ ರೂಪಾಯಿ ದೇಣಿಗೆಯನ್ನು ನೀಡುವುದಲ್ಲದೆ ಸಭೆಯಲ್ಲಿ ನಗದ್ದಾಗಿ ಒಂದು ಲಕ್ಷ ರೂಪಾಯಿಗಳನ್ನು ನೀಡಿ ಪ್ರೋತ್ಸಾಹಿಸಿದರು ಶ್ರೀ ಕುರುಂಜಿಯವರು. ಅಲ್ಲದೇ ಸುಮಾರು ಐದು ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಗುವ ಗೌಡ ಸಮುದಾಯ ಭವನಕ್ಕೆ ತಗಲುವ ವೆಚ್ಚವನ್ನು ಭರಿಸಲು ಸಹಕರಿಸುವಂತೆ ಸ್ವಜಾತಿ ಬಾಂಧವರಲ್ಲಿ ವಿನಂತಿಸಿಕೊಂಡರು.

ಅಂದಿನ ಸಭೆಯಲ್ಲಿ ಶ್ರೀ ಪಡ್ಡಂಬೈಲು ವೆಂಕಟರಮಣಗೌಡರು, ಎಂ. ಆರ್. ಬಾಲಕೃಷ್ಣ ಗೌಡರು, ಶ್ರೀ ಅಂಣೆಗೌಡರು, ಉಳುವಾರನ ವೇಣುಗೋಪಾಲ್‌ನವರು, ಬೋಜಪ್ಪ ಗೌಡರು, ತುಂತಜೆ ಗಣೇಶ್‌ನವರು, ಕೋಡಿ ನಂಜುಂಡನವರು, ಕೋಳಿಮುಡಿಯನ ಅನಂತ್‌ಕುಮಾರ್‌ನವರು ಅಲ್ಲದೆ ಹಲವಾರು ಜನ ಗಣ್ಯ ಮಹನೀಯರುಗಳು ಕಟ್ಟಡ ನಿರ್ಮಾಣದ ಬಗ್ಗೆ ಸೂಕ್ತ ಸಲಹೆ ನೀಡಿದರು. ಸಭೆಯಲ್ಲಿ ಸಾವಿರಾರು ಜನರು ಭಾಗವಹಿಸಿದ್ದರು. ಸಭೆಯ ಆಣತಿಯಂತೆ ಶ್ರೀ ಕುರುಂಜಿ ವೆಂಕಟರಮಣ ಗೌಡರ ನೇತೃತ್ವದ "ನಿಧಿ ಸಂಗ್ರಹ" ಸಮಿತಿಯ ಅಧ್ಯಕ್ಷರನ್ನಾಗಿ ಆರಿಸಿ ಅಧಿಕಾರವನ್ನು ವಹಿಸಿಕೊಟ್ಟಿತು. ವಿಶ್ವದ ಎಲ್ಲಾ ಗೌಡ ಬಾಂಧವರಿಂದ ನಿಧಿ ಸಂಗ್ರಹವು ಹರಿದು ಬರುವ ಘೋಷಣೆಯನ್ನು ಮಾಡಲಾಯಿತು.

ಕಾರ್ಯಕ್ರಮದ ಕೊನೆಯಲ್ಲಿ ಕೊಡಗು ಗೌಡ ವಿದ್ಯಾ ಸಂಘದ ಗೌರವ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಸಂಘದ ಕಾರ್ಯದರ್ಶಿಗಳು ಆದ ಶ್ರೀ ಕೋಳುಮುಡಿಯನ ಅನಂತ್‌ಕುಮಾರ್‌ನವರು ವಂದನಾರ್ಪಣೆಯನ್ನು ಮಾಡುವುದರೊಂದಿಗೆ ಸಭೆಯು ಭರಕಾಸ್ತಯಿತು.

**ಸಂಗಾತಿ ವರದಿ**

## ಚಿರಸ್ಮರಣೆ


ಮೋಹನ್ ವೈ. ಕಲ್ಲು ಮುಟ್ಲು

ಭಗವಂತನು ನಿನ್ನ ಆತ್ಮಕ್ಕೆ ಯಾಗೋಳು
ಚಿರಶಾಂತಿನ ಕೊಡಲಿತ್ತೇಳಿ ಪ್ರಾರ್ಥಿಸುವೆ

ಅಪ್ಪ : ಕಲ್ಲುಮುಟ್ಲು ಯಾದವ, ಅವ್ವ : ರುಕ್ಮಣಿ
ತಮ್ಮ : ಪವನ ಮತ್ತೆ ಬಂಧು ಮಿತ್ರರು, ಕುಟುಂಬಸ್ಥರು ಹಂಗೆನೆ
ಕಲ್ಲುಮುಟ್ಲು ಬಸಪ್ಪ ಮತ್ತೆ ರೂಪ ದಂಪತಿಗ, ಬೆಂಗಳೂರು

ಜನನ : 6-10-1980 ಮರಣ : 27-12-1998

ಬ್ರಿಟಿಷ್‌ರ ಆಳ್ವಿಕೆ ಸಮಯದಲ್ಲಿ ಅಂದರೆ 20ನೇ ಶತಮಾನದ 2ನೇ ದಶಕದ ನಂತರ, ಹಾಗೂ ಸ್ವಾತಂತ್ರ್ಯದ ನಂತರ ನನಗೆ ತಿಳಿದು ಬಂದಂತೆ, ಉನ್ನತ ವಿದ್ಯೆ ಮತ್ತು ಹುದ್ದೇಗೇರಿದ ಕೊಡಗಿನ ನಮ್ಮ ಜನಾಂಗದ ಮೊಟ್ಟ ಮೊದಲಿಗರು :

| | | |
|---|---|---|
| ಸಬ್ ಇನ್ಸ್‌ಪೆಕ್ಟರ್ (ಪೋಲಿಸ್) | : | ದಿ. ಶಿರಕಜ್ಜೆ ಪೊನ್ನಪ್ಪ ರಾಮಪ್ಪ - 1926 |
| ಕಮೀಷನ್ ಆಫೀಸರ್ (ಡಿಫೆನ್ಸ್) | : | 1. ಸುಬೇದಾರ್ ಮೇಜರ್ 1914-1918 ವರ್ಲ್ಡ್ ವಾರ್ I |
| | | 2. ಕ್ಯಾಪ್ಟನ್ ಇಂಡಿಯನ್ ಟೆರಿಟೋರಿಯಲ್ ಫೋರ್ಸ್, ಕೊಡಗಿನ ಮಡಿಕೇರಿಯಲ್ಲಿ ಸೆಕೆಂಡ್ ವರ್ಲ್ಡ್ ವಾರ್ ಮಧ್ಯದಲ್ಲಿ |
| | | 3. ಮೇಜರ್ 1939-1945, ವರ್ಲ್ಡ್ ವಾರ್ II |
| ಪಾರುಪತ್ತೆಗಾರ (ರೆವಿನ್ಯೂ) | : | ಡಿ. ಕುಂಬುಗೌಡನ ಕುಶಾಲಪ್ಪ - 1910, ನಿಡ್ಯಮಲೆ ರಾಮಪ್ಪ - 1910 |
| ಸುಬೇದಾರ್ (ರೆವಿನ್ಯೂ) | : | ಡಿ. ಕೆದಂಬಾಡಿ ಪುಟ್ಟಯ್ಯ ಸೋಮಪ್ಪ 1943 |
| ರೇಂಜ್ ಫಾರೆಸ್ಟ್ ಆಫೀಸರ್ (ಫಾರೆಸ್ಟ್) | : | ದಿ. ತೋಟಂಬೈಲು ಮಾದಪ್ಪ - 1942 |
| ಗ್ರಾಜ್ಯುಯೆಟ್ ಟೀಚರ್ (ಎಜುಕೇಷನ್) | : | ದಿ. ಪೊಡನೋಳಂಡ್ರ ಐಯ್ಯಪ್ಪ ಬಸಪ್ಪ, ಬಿ.ಎ.ಬಿ.ಟಿ. 1933 |
| ಡಿಸ್ಟ್ರಿಕ್ ಅಂಡ್ ಸೆಷನ್ ಜಡ್ಜ್ (ಜ್ಯುಡಿಷಿಯಲ್) | : | ದಿ. ನಿಡ್ಯಮಲೆ ರಾಮಪ್ಪ ಮುದ್ದಪ್ಪ, ಬಿ.ಎ.ಬಿ.ಎಲ್ - 1934 |
| ಮೆಂಬರ್ ಆಫ್ ಪಾರ್ಲಿಮೆಂಟ್ (ಪಾಲಿಟಿಕ್ಸ್) | : | ದಿ. ನಿಡ್ಯಮಲೆ ರಾಮಪ್ಪ ಸೋಮಣ್ಣ, ಬಿ.ಎ.ಬಿ.ಎಲ್., 1952 |
| ಡಾಕ್ಟರ್ (ಮೆಡಿಕಲ್ ಅಂಡ್ ಹೆಲ್ತ್) | : | ಶ್ರೀ ಕುಂಞ್ಞಾಳಿ ಪುಟ್ಟಯ್ಯ ಬೋಪಣ್ಣ, ಎಂ.ಬಿ.ಬಿ.ಎಸ್., 1943 |
| ಡಾಕ್ಟೊರೇಟ್ (ಇಂಜಿನಿಯರಿಂಗ್) | : | ಶ್ರೀ ಪೈಕೇರ ಚೆಂಗಪ್ಪ ಪೊನ್ನಪ್ಪ, ಪಿ.ಹೆಚ್.ಡಿ. ಇನ್ ಬಿ. ಇ. ಎಲೆಕ್ಟ್ರಾನಿಕ್ಸ್, ಗ್ಲಾಸ್‌ಗೊ ಯುನಿವರ್ಸಿಟಿ, ಯು. ಕೆ. 1957 |
| ಕೆ.ಎ.ಎಸ್/ಐ.ಎ.ಎಸ್ (ಸಿವಿಲ್ ಸರ್ವಿಸ್) | : | ಶ್ರೀ ಕೋಳಿಬೈಲು ಅಚ್ಚಯ್ಯ ಬೆಳ್ಯಪ್ಪ, ಬಿ. ಇ. (ಎಲೆಕ್ಟ್ರಾನಿಕ್ಸ್) 1985 |
| ಚೀಫ್ ಇಂಜಿನೀಯರ್ (ಇಂಜಿನಿಯರಿಂಗ್) | : | ಕೆದಂಬಾಡಿ ಸೋಮಪ್ಪ ಆನಂದ, ಬಿ. ಇ. (ಎಲೆಕ್ಟ್ರಾನಿಕ್ಸ್) 1992 ರಿಟೈರ್ಡ್ |
| ಎಂ.ಡಿ. ಕೆ.ಎಸ್.ಎಫ್.ಸಿ. (ಅಕೌಂಟೆನ್ಸಿ) | : | ಶ್ರೀ ದಂಬೆಕೋಡಿ ಸುಬ್ರಾಯ ಆನಂದ, ಸಿ. ಎ. 1973 |

ಕಳುಹಿಸಿದವರು : ನಂಗಾರು ಅಪ್ಪಾಜಿ, ಬೆಂಗಳೂರು

## ಜೈನೀರ ಮತ್ತು ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘದ ವಾರ್ಷಿಕೋತ್ಸವ

ದಿನಾಂಕ 16-1-2000 ರಂದು ಹೊಸ ಸಹಸ್ರಮಾನದಲ್ಲಿ ಗೌಡ ಜನಾಂಗದವರಿಂದ ಮೇಲ್ಕಂಡ ಸಂಘದ ವಾರ್ಷಿಕ ಸಭೆ ನಡೆಯಿತು. ಸಂಘದ ಅಧ್ಯಕ್ಷರಾದ ಕ್ಯಾಪ್ಟನ್ ದೇವಜನ ರಾಜುರವರು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಪೂಜಾರೀರ ಮೊಣ್ಣಪ್ಪನವರು ಮತ್ತು ಅಮ್ಮಾಜೀರ ಪೊನ್ನಪ್ಪನವರು ಆಗಮಿಸಿದ್ದರು.

ಕುಮಾರಿ ಬಿಂದಿಯಾಳ ಪ್ರಾರ್ಥನೆಯೊಂದಿಗೆ ಆರಂಭಗೊಂಡ ಸಭೆ, ಸಂಘದ ಕಾರ್ಯದರ್ಶಿ ಹಾಗೂ ನೋಟರಿ ಉಡುದೊಳಿ ಸೋಮಪ್ಪನವರು ಕಾರ್ಯಕ್ರಮ ನಿರೂಪಿಸುವುದರೊಂದಿಗೆ ಸಾಂಪ್ರದಾಯಿಕವಾಗಿ ಎಲ್ಲರನ್ನು ಸ್ವಾಗತಿಸಿದರು. ಮೇಲ್ವಿಚಾರಕ ಸದಸ್ಯರಾದ ಜೈನೀರ ಧನಂಜಯ, ಸಂಘದ ಬೈಲಾ ವಾಚಿಸಿದರು. ಖಜಾಂಚಿ ಜೈನೀರ ರಾಜಕುಮಾರ್ ವೇದಿಕೆಯಲ್ಲಿದ್ದರು. ಶ್ರೀ ವೈ. ವೆಂಕಪ್ಪ ವಂದನಾರ್ಪಣೆ ಕಾರ್ಯ ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಹಿರಿಯರಾದ ಶ್ರೀ ಪೂಜಾರೀರ ಮೊಣ್ಣಪ್ಪನವರು ಸಂಘವನ್ನು ನೋಂದಾಯಿಸುವ ಬಗ್ಗೆ ಪೂರ್ಣ ಮಾರ್ಗದರ್ಶನ ಮಾಡಿ ಸೇವಾ ಮನೋಭಾವದಿಂದ ಸಂಘಟಿಕರು ಕೆಲಸ ಮಾಡುವಂತೆ ತಿಳಿಸಿದರು.

ಇನ್ನೊಬ್ಬ ಅತಿಥಿ ಕಾವೇರಿನಾಡಿನ ಸಂಸ್ಥಾಪಕ ಅಮ್ಮಾಜೀರ ಪೊನ್ನಪ್ಪನವರು ಸರ್ವ ಗೌಡ ಬಾಂಧವರಿಗೆ ಅನ್ವಯವಾಗುವಂತೆ ಸಂಘಕ್ಕೆ ನಾಮಕರಣ ಮಾಡಿ ಇಂತಹ ಸಂಘಕ್ಕೆ ಪ್ರೋತ್ಸಾಹ ನೀಡಿ ಸಹಕರಿಸುವಂತೆ ಸೇರಿದವರನ್ನು ವಿನಂತಿಸಿ ಸಂಘಕ್ಕೆ ಶುಭ ಹಾರೈಸಿದರು. ಸಂಘದ ಹೆಸರನ್ನು ಎಲ್ಲರಿಗೂ ಅನ್ವಯವಾಗುವಂತೆ ಬದಲಾಯಿಸಲು ಎಲ್ಲಾ ಸಭಿಕರು ಒಲವು ತೋರಿದರು. ಸಂಘದ ವತಿಯಿಂದ ಕೊಡಗಿನ ಸಾಂಪ್ರದಾಯಿಕ ಭೋಜನದ ವ್ಯವಸ್ಥೆ ಇತ್ತು. ಅಲ್ಲದೆ ಆಸುಪಾಸಿನ ಗೌಡ ಬಂಧುಗಳು ಆಗಮಿಸಿದ್ದು ಸಭೆ ಯಶಸ್ವಿಯಾಗಿ ಮುಕ್ತಾಯಗೊಂಡಿತು.

ವರದಿ : ಜೈನೀರ ಧನಂಜಯ

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.